# ಚಾತುರ್ಮಾಸ್ಯ ವ್ರತಾಚರಣೆ



ಸಂಪಾದಕರು

ಶ್ರೀನಿವಾಸ ಸು. ಮಠದ

ಗೀತಾ ಪ್ರಕಾಶನ, ವಿಜಾಪುರ

# ಚಾತುರ್ಮಾಸ್ಯ ವ್ರತ ಸಂಕಲ್ಪ ಹಾಗೂ ಸಮರ್ಪಣೆ ಮಂತ್ರಗಳು

ಆಚಮನ, ಪ್ರಾಣಾಯಾಮ, ದೇಶಕಾಲಗಳನ್ನು ಉಚ್ಚರಿಸಿ.. ಶ್ರುತಿಸ್ಮೃತಿ ಪುರಾಣೋಕ್ತ ಫಲಪ್ರಾಪ್ತ್ಯರ್ಥಂ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಚಾತುರ್ಮಾಸ್ಯವ್ರತಂ ಕರಿಷ್ಯೇ–

1) **ಶಾಕವ್ರತ–** ಆಷಾಢ ಶುದ್ಧ ಏಕಾದಶಿಯಿಂದ ಶ್ರಾವಣ ಶುದ್ಧದಶಮಿವರೆಗೆ

ಸಂಕಲ್ಪ : ವಾಸುದೇವ ಶುಚೌಮಾಸೇ ಶಾಕವ್ರತಮನುತ್ತಮಮ್।
ತ್ವತ್ಪ್ರೀತ್ಯರ್ಥಂ ಕರಿಷ್ಯೇಽಹಂ ನಿರ್ವಿಘ್ನಂ ಕುರುಮಾಧವ॥

ಸಮರ್ಪಣೆ : ವಾಸುದೇವ ನಮಸ್ತುಭ್ಯಂ ಪ್ರಥಮೇ ಮಾಸಿ ಮತ್ಕೃತಮ್।
ಶಾಕವ್ರತಂ ಮಯಾ ತೇನ ಸಂತುಷ್ಟೋ ಭವ ಮಾಧವ॥

2) **ದಧಿವ್ರತ–** ಶ್ರಾವಣಶುದ್ಧ ಏಕಾದಶಿಯಿಂದ ಭಾದ್ರಪದಶುದ್ಧ ದಶಮಿವರೆಗೆ

ಸಂಕಲ್ಪ : ಸಂಕರ್ಷಣಾರವಿಂದಾಕ್ಷ ಕರಿಷ್ಯೇಽಹಂ ದಧಿವ್ರತಮ್।
ದ್ವಿತೀಯೇ ಮಾಸಿ ದೇವೇಶ ನಿರ್ವಿಘ್ನಂ ಕುರುಮೇ ಪ್ರಭೋ॥

ಸಮರ್ಪಣೆ: ಸಂಕರ್ಷಣ ನಮಸ್ತುಭ್ಯಂ ಶ್ರವಣೇ ಮತ್ಕೃತೇನ ಚ।
ದಧಿವ್ರತೇನ ದೇವೇಶ ತುಷ್ಟೋ ಭವ ಜನಾರ್ದನ॥

3) **ಕ್ಷೀರವ್ರತ–** ಭಾದ್ರಪದ ಶುದ್ಧ ಏಕಾದಶಿಯಿಂದ ಆಶ್ವಿನ ಶುದ್ಧ ದಶಮಿವರೆಗೆ

ಸಂಕಲ್ಪ : ಪ್ರದ್ಯುಮ್ನ ತವ ತುಷ್ಟ್ಯರ್ಥಂ ಪ್ರೋಷ್ಟಪದ್ಯಾಂ ತೃತೀಯಕೇ।
ನಿರ್ವಿಘ್ನಂ ಕುರು ದೇವೇಶ ಕರಿಷ್ಯೇಽಹಂ ಪಯೋವ್ರತಂ॥

ಸಮರ್ಪಣೆ : ಶ್ರೀಪ್ರದ್ಯುಮ್ನ ನಮಸ್ತುಭ್ಯಂ ಮಾಸಮಾರಭ್ಯ ಯತ್ಕೃತಂ।
ಇಷ್ಟದೋ ಭವ ಸರ್ವೇಶ ಗೃಹೀತ್ವಾ ತು ಪ್ರಯೋವ್ರತಂ॥

4) **ದ್ವಿದಲ ವ್ರತ–** ಆಶ್ವಿನ ಶುದ್ಧ ಏಕಾದಶಿಯಿಂದ ಕಾರ್ತಿಕ ಶುದ್ಧ ದಶಮಿವರೆಗೆ

ಸಂಕಲ್ಪ : ಅನಿರುದ್ಧ ಸುರೈರ್ವಂದ್ಯ ದ್ವಿದಳ ವ್ರತಮುತ್ತಮಂ।
ಕರೋಮ್ಯಹಮಿಷೇ ಮಾಸೇ ನಿರ್ವಿಘ್ನಂ ಕುರು ಮೇ ಪ್ರಭೋ॥

ಸಮರ್ಪಣೆ : ಅನಿರುದ್ಧ ನಮಸ್ತುಭ್ಯಂ ದ್ವಿದಳಾಖ್ಯ ವ್ರತೇನ ಚ।
ಮತ್ಕೃತೇನಾಶ್ವಿನೇ ಮಾಸೇ ಪ್ರೀತ್ಯರ್ಥಂ ಫಲದೋಭವ॥

****

1

# ಚಾತುರ್ಮಾಸ್ಯ ವ್ರತಾಚರಣೆ

ಸಂಪಾದಕರು
ಶ್ರೀನಿವಾಸ.ಸು.ಮಠದ

ಗೀತಾ ಪ್ರಕಾಶನ
ಅಜರೇಕರ ಚಾಳ ವಿಜಾಪೂರ

# CHATURMASYA VRATACHARANE

By Srinivas. S. Mathad. Bsc;MA

Recipient of " Parimala Prashasti " Jnanajyoti Award " and " Haridas Seva Praveena "

Ajarekar Chal
Meenaxi Chowk,
BIJAPUR - 586 101.

Mobile No. : 9972078061

First Edition : 2012 (Feb)

Copies : 1000

Pages : 28



Publisher : Geeta Prakashana
Ajarekar Chal
Meenaxi Chowk
BIJAPUR - 586 101.
Ph : 08352-258362

Printers : Vijay Offset Printers
Meenaxi Chowk, Ajarekar Chal
BIJAPUR - 586 101
Ph : 08352-251792

# ಲೇಖಕನ ನುಡಿ

ಶ್ರೀಹರಿಯ ಪ್ರೇರಣೆಯಿಂದ " ಚಾತುರ್ಮಾಸ್ಯ ವ್ರತಾಚರಣೆ" ಕೃತಿಯಲ್ಲಿ ಚಾತುರ್ಮಾಸ್ಯದ ಕುರಿತಂತೆ ಕೆಲವು ಲೇಖನಗಳನ್ನು ನೀಡಿದ್ದೇನೆ.

ಈ ಕೃತಿಯನ್ನು ನಮ್ಮ ಕುಲಸ್ವಾಮಿಯಾದ ಶ್ರೀ ಶ್ರೀನಿವಾಸದೇವರ ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಿಸಿದ್ದೇನೆ.

ಈ ಕೃತಿಯನ್ನು ಅವಲೋಕಿಸಿ ಅನೇಕ ಸಲಹೆ ಸೂಚನೆಗಳನ್ನು ನೀಡಿದ ಶ್ರೀ ಪಂ॥ ಮೊಖಾಸಿ ಮಧ್ವಾಚಾರ್ಯರಿಗೆ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳು

ಈ ಚಾತುರ್ಮಾಸ್ಯದ ಶಾಕ, ದ್ವಿದಳ ವ್ರತ ಮಾಡುವಾಗ ಪದಾರ್ಥಗಳ ಸ್ವೀಕೃತಿಯಲ್ಲಿ ಕೆಲವು ಸಂಪ್ರದಾಯ ಭೇದಗಳಿವೆ. ಅವರವರ ಗುರುಹಿರಿಯರು ತಿಳಿಸಿದಂತೆ ಮಾಡುವುದು ಸೂಕ್ತ.

ಈ ಕೃತಿಯನ್ನು ಹೊರತರುವಲ್ಲಿ ಸಹಾಯಮಾಡಿದ ಶ್ರೀ ಪಂ॥ ಪ್ರದ್ಯುಮ್ನಾಚಾರ್ ಪೂಜಾರ, ನನ್ನ ತಮ್ಮ ಚಿ॥ ವಾದಿರಾಜ ಮಠದ, ನನ್ನ ಸುಪುತ್ರ ಚಿ॥ ಆನಂದತೀರ್ಥ ಮಠದ, ಅಳಿಯಂದಿರಾದ ಶ್ರೀ ರಾಘವೇಂದ್ರ ಅಡಬಡ್ಡಿ ಇವರಿಗೆ ಶ್ರೀ ಹರಿವಾಯುಗುರುಗಳು ಜ್ಞಾನಭಕ್ತ್ಯಾದಿಗಳನ್ನು ಕರುಣಿಸಲಿ.

ಈ ಚಿಕ್ಕ ಕೃತಿಯಿಂದ ಶ್ರೀಹರಿವಾಯುಗಳು ಸುಪ್ರೀತರಾಗಲಿ

ಈ ಕೃತಿಯನ್ನು ಸಕಾಲದಲ್ಲಿ ಮುದ್ರಣ ಮಾಡಿಕೊಟ್ಟ ಮೆ॥ ವಿಜಯ ಆಫ್‌ಸೆಟ್ ಪ್ರಿಂಟರ್ಸ ಅವರಿಗೆ ಧನ್ಯವಾದಗಳು

ದಿನಾಂಕ :
23–2–2012

ಇತಿ ಸಜ್ಜನ ಸೇವಕ
ಶ್ರೀನಿವಾಸ ಸು. ಮಠದ

# ವಿಷಯಾನುಕ್ರಮಣಿಕಾ

## 5

# ಚಾತುರ್ಮಾಸ್ಯ ವ್ರತ – ಪರಿಚಯ

ಪ್ರತಿವರುಷದ ಹನ್ನೆರಡು ತಿಂಗಳುಗಳಲ್ಲಿ ಚಾತುರ್ಮಾಸವು ಶ್ರೀಹರಿಗೆ ಅತ್ಯಂತ ಪ್ರಿಯತಮವಾದ ಕಾಲವಾಗಿದೆ. ಈ ನಾಲ್ಕು ತಿಂಗಳುಗಳಲ್ಲಿ ಮಾಡಿದ ದಾನ, ವ್ರತ, ಜಪ ಹೋಮಗಳು ಅನಂತ ಫಲವನ್ನು ತಂದುಕೊಡುತ್ತವೆ ಎಂಬುದಾಗಿ ಶ್ರೀ ವರಾಹರೂಪೀ ಭಗವಂತನು ಧರಣೀದೇವಿಯನ್ನು ಕುರಿತು ತಿಳಿಸಿದ್ದಾನೆ.[1]

ಆಷಾಢ ಶುಕ್ಲದಶಮಿಯಿಂದ ಪ್ರಾರಂಭಿಸಿ ಕಾರ್ತಿಕ ಶುಕ್ಲ ಪೌರ್ಣಿಮೆಯವರೆಗಿನ ನಾಲ್ಕು ತಿಂಗಳು ಚಾತುರ್ಮಾಸ್ಯದ ಅವಧಿಯೆಂದು ತಿಳಿಯಬೇಕು.[2]

ಆಷಾಢ ಶುಕ್ಲ ದಶಮಿಯಿಂದ ಕಾರ್ತಿಕ ಶುಕ್ಲ ದಶಮಿಯವರೆಗೆ ಎಂಬುದಾಗಿ ಹೇಳುವದುಂಟು.

ಹಿಂದಕ್ಕೆ ಮೇರು ಪರ್ವತದ ಶಿಖರದ ಮೇಲೆ ಭಗವಂತ ಪವಡಿಸಿರುವಾಗ ಭಗವಂತನನ್ನು ಎಲ್ಲ ದೇವಗಣಗಳು ಸುತ್ತುವರಿದು ವೇದವಾಕ್ಯಗಳಿಂದ ಸ್ತುತಿಸಿದರು. ಆಗ ದಕ್ಷಿಣಾಯನವು ಬಂದಿರುವುದನ್ನು ತಿಳಿದ ದೇವತೆಗಳು "ಭಗವನ್! ನಿನ್ನ ಆಜ್ಞಾನುಸಾರವಾಗಿ ಈಗ ನಮಗೆ ರಾತ್ರಿ ಸಮಯವು ಪ್ರಾಪ್ತವಾಗಿದೆ. ಆದ್ದರಿಂದ ನಾವೆಲ್ಲರೂ ನಮ್ಮ ನಮ್ಮ ಸ್ಥಾನಗಳಿಗೆ ಹೊರಟು ಹೋಗುತ್ತೇವೆ" ಎಂದು ವಿಜ್ಞಾಪಿಸಿಕೊಂಡರು. ಆಗ ರಾತ್ರಿಯು ಶುಭ್ರವಸ್ತ್ರವನ್ನುಧರಿಸಿದ, ಶ್ಯಾಮವರ್ಣದ, ಕೈಯಲ್ಲಿ ಪರಶುವನ್ನು ಹಿಡಿದಿರುವ ಸ್ತ್ರೀರೂಪದಿಂದ ಪ್ರಕಟವಾಗಿ ಭಗವಂತನಿಗೆ ಸಾಷ್ಟಾಂಗ ನಮಸ್ಕರಿಸಿ ಹೇಳಿದಳು. ಹೇಭಗವಂತ! ನಿನಗೆ ಕೈಮುಗಿದು ಬೇಡಿಕೊಳ್ಳುವೆನು. ಈ ದಕ್ಷಿಣಾಯನದಲ್ಲಿ ಯಾರೂ ವಿವಾಹ, ಉಪನಯನಾದಿ ಶುಭಕರ್ಮಗಳನ್ನು ಮಾಡುವದಿಲ್ಲ, ಆದ್ದರಿಂದ ನಾನು ಜನರಿಂದ ನಿಂದಿತಳಾಗಿದ್ದೇನೆ. ಜನರಿಂದ ಬಹಿಷ್ಕೃತಳಾಗಿರುವ ಕಾರಣ ನನ್ನ ಜೀವನವು ವ್ಯರ್ಥವಾಗಿದೆ ನೀನು ನನ್ನನ್ನು ಅನುಗ್ರಹಿಸಿದರೆ ಮಾತ್ರ ಜೀವಿಸುವೆನು. ಇಲ್ಲವಾದರೆ ಜೀವಿಸಲಾರೆ." ಈ ರೀತಿ ಪ್ರಾರ್ಥಿಸಿ ಭಗವಂತನಿಗೆ ನಮಿಸಿ ನಿಂತುಕೊಂಡಳು. ಆಗ ಅಲ್ಲಿದ್ದ ದೇವತೆಗಳೆಲ್ಲರೂ "ಹೇ ನಾಥ! ಕೃಪಾಸಿಂಧೋ! ಶರಣಾಗತ ವತ್ಸಲ! ಈ ರಾತ್ರಿಯ ಮೇಲೆ ನೀನು ದಯತೋರು. ನಿನ್ನ ಅನುಗ್ರಹದಿಂದ ಅವಳು ಕೃತಾರ್ಥಳಾಗುವಳು". ಎಂದು ವಿಜ್ಞಾಪಿಸಿಕೊಂಡರು, ಇದರಿಂದ ಪ್ರಸನ್ನನಾದ ಭಗವಂತನು ರಾತ್ರಿಗೆ ಉತ್ತಮವಾದ ವರವನ್ನು ಅನುಗ್ರಹಿಸಿದನು. ಎಲೈ ರಾತ್ರಿಯೇ! ನಿನಗೆ ಮೂರು ಯಾಮಗಳಿವೆ. ಅವುಗಳಲ್ಲಿ ಮೊದಲಿನೆರಡು ಯಾಮಗಳು ನನಗೆ ಮಹಾಪ್ರಿಯ. ಚಾತುರ್ಮಾಸ್ಯವಿದ್ದಾಗ ಮಾಡಿದ ಜಪ, ದಾನ, ವ್ರತಾದಿ ಕರ್ಮಗಳು

---

1) ಅಸ್ತಿ ಪ್ರಿಯತಮಃ ಕಾಲಃ ಚಾತುರ್ಮಾಸ್ಯಾಭಿದೋ ಮಮ।
ದಾನಂ ವ್ರತಂ ಜಪೋ ಹೋಮಃ ತತ್ರಾನಂತಗುಣಂ ಸ್ಮೃತಮ್॥
ಶ್ರೀವರಾಹ ಪುರಾಣ ಚಾತುರ್ಮಾಸ್ಯ ಮಹಾತ್ಮೆ (1–16)

2) ಆಷಾಢೇ ದಶಮೀಂ ಶುಕ್ಲಾಂ ಆರಭ್ಯಸ್ಯಾತ್ತುಕಾರ್ತಿಕೀ।
ಪೌರ್ಣಮಾಸೀ ತಾವದಿದಂ ಚಾತುರ್ಮಾಸ್ಯವ್ರತಾದಿಕಮ್॥ (1–26)

ಉಳಿದ ಎಂಟು ಮಾಸಗಳಲ್ಲಿ ಮಾಡಿದ್ದಕ್ಕಿಂತ ಅನಂತ ಪಟ್ಟು ಫಲಕೊಡಲು ಸಮರ್ಥವಾಗುತ್ತವೆ.[3]

ಚಾತುರ್ಮಾಸ್ಯದಲ್ಲಿ ಮೊದಲನೆಯದು ಶ್ರಾವಣ ಮಾಸ, ಎರಡನೆಯದು ಭಾದ್ರಪದ, ಮೂರನೆಯದು ಆಶ್ವಿನಮಾಸ, ನಾಲ್ಕನೆಯದು ಕಾರ್ತಿಕ ಮಾಸವೆಂದು ತಿಳಿಯಲ್ಪಟ್ಟಿವೆ.[4]

ಚಾತುರ್ಮಾಸ್ಯದಲ್ಲಿಯೂ ಕೂಡ ಸತ್ಕರ್ಮಾನುಷ್ಠಾನದಿಂದ ದಿನದಿಂದ ದಿನಕ್ಕೆ ಪುಣ್ಯವೃದ್ಧಿಯಾಗುತ್ತದೆ.

ಭಗವಂತನ ಈ ಮಾತುಗಳನ್ನು ಕೇಳಿ ದೇವತೆಗಳು ಹರ್ಷಭರಿತರಾದರು. ರಾತ್ರೀ ದೇವಿ ಅತ್ಯಂತ ಸಂತುಷ್ಟಳಾಗಿ ಭಗವಂತನಿಗೆ ಪುನಃ ಪುನಃ ನಮಸ್ಕಾರ ಮಾಡಿದಳು. ಅಂದಿನಿಂದ ಚಾತುರ್ಮಾಸ್ಯವು ಭಗವಂತನಿಗೆ ಪ್ರಿಯವಾಯಿತು.

ಈ ಚಾತುರ್ಮಾಸ್ಯದಲ್ಲಿ ಯಾರು ಪ್ರತಿದಿನ ಭಕ್ತಿಯಿಂದ ಸ್ನಾನ, ವ್ರತ, ದಾನಾದಿಗಳನ್ನು ಮಾಡುವರೋ ಅವರಿಗೆ ಭಗವಂತನು ಸುಪ್ರೀತನಾಗಿ ಅನಂತ ಫಲವನ್ನು ಕೊಡುತ್ತಾನೆ.[5]

ಭಗವಂತನ ಯೋಗನಿದ್ರೆಯ ಕಾಲವೇ ಚಾತುರ್ಮಾಸ್ಯಕಾಲವೆಂದು ಪ್ರಸಿದ್ಧವಾಗಿದೆ. ಇವರ ವಿವರಣೆ ಇಲ್ಲಿದೆ.

**ಶ್ರೀಹರಿಯ ನಿದ್ದೆಯ ಸ್ವರೂಪ**

ಬ್ರಹ್ಮದೇವರು ಹೇಳುತ್ತಾರೆ–ಆಷಾಢ ಮಾಸದಲ್ಲಿ ಸೂರ್ಯನು ಕರ್ಕಾಟಕ ರಾಶಿಯಲ್ಲಿ ಪ್ರವೇಶ ಮಾಡಿದಾಗ. ಆಷಾಢ ಶುಕ್ಲ ಏಕಾದಶಿಯಲ್ಲಿ ದೇವತೆಗಳಿಗೆ ರಾತ್ರಿಯಾಗುತ್ತದೆ. ಈ ಆಷಾಢ ಮಾಸದಲ್ಲಿ ಅಭಿಮಾನಿಯಾದ ವಾಮನನಾಮಕನಾದ ಶ್ರೀಮನ್ಮಹಾವಿಷ್ಣುವು ವಿಶ್ವ ತೈಜಸ ಪ್ರಾಜ್ಞ ಎಂಬರೂಪಗಳಲ್ಲಿ ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳನ್ನು ಜೀವರಿಗೆ ಉಂಟುಮಾಡಿ, ಇನ್ನೂ ಅನೇಕಾನೇಕ ರೂಪಗಳನ್ನು ತೆಗೆದುಕೊಂಡು, ಎಲ್ಲರೂಪಗಳಲ್ಲಿ ನಿರ್ವಿಕಾರನಾಗಿದ್ದು, ಸಮಸ್ತ

---

3) ತ್ರಿಯಾಮೇ ತೇ ತ್ರಯೋ ಯಾಮಾಃ ತತ್ರಾದ್ಯೌ ದ್ವೌ ಮಹಾಪ್ರಿಯೌ।
ಸ್ಯಾತಾಂ ತತ್ರ ಕೃತಂ ಕರ್ಮ ಜಪದಾನವ್ರತಾದಿಕಮ್।
ಅನಂತಗುಣಮೇವ ಸ್ಯಾತ್ ಅಷ್ಟಮಾಸ ಕೃತಾದಪಿ॥ ಚಾ.ಮ (1–36)

4) ಆದ್ಯಃ ಸ್ಯಾತ್ ಶ್ರಾವಣೋ ಮಾಸೋ, ನಭಸ್ಯೋಽಥ ದ್ವಿತೀಯಕಃ।
ತೃತೀಯಶ್ಚಾಶ್ವಿನೋ ಮಾಸಃ ಚತುರ್ಥಃ ಕಾರ್ತಿಕಃ ಸ್ಮೃತಃ॥ (1–37)

5) ಕಥಿತಂ ಯೇ ಪ್ರಕುರ್ವಂತಿ ತಸ್ಮಿನ್‌ದಾನ ವ್ರತಾದಿಕಮ್।
ದಿನೇ ದಿನೇಽನಂತಗುಣಂ ತತ್ಫಲಂ ಪ್ರದದಾಮ್ಯಹಮ್॥
ಚಾತುರ್ಮಾಸ ಮಹಾತ್ಮೆ (1–40)

ದೇವತೆಗಳಿಂದ ಸ್ತುತ್ಯನಾಗಿರುತ್ತಾನೆ. ಅಂತಹ ಸಮಸ್ತ ಮಂಗಳಗಳಿಗೂ ದೇವತೆಯಾದ ಜನಾರ್ದನ ನಾಮಕನಾದ ಶ್ರೀಲಕ್ಷ್ಮೀನಾರಾಯಣನು ಯೋಗ ನಿದ್ರೆಯನ್ನು ಸ್ವೀಕರಿಸಿ ಶಯನಾವಸ್ಥೆಯನ್ನು ತೋರಿಸುತ್ತಾನೆ.[6]

ಆ ಭಗವಂತನು ಮಲಗಿರುವಾಗ ಯಾವುದೇ ವಿವಾಹಾದಿ ಶುಭಕಾರ್ಯಗಳನ್ನು ಮಾಡಬಾರದು. ಚೌಲ, ಉಪನಯನ ಮುಂತಾದವುಗಳನ್ನು ಮಾಡಬಾರದು.[7]

ಅಜ್ಞಾನದಿಂದ ಮಂಗಳ ಕಾರ್ಯಗಳನ್ನು ಮಾಡಿದರೆ ಅವರಿಗೆ ಮರಣಾದಿ ರೂಪವಾದ ಅನರ್ಥವು ಉಂಟಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ಮಂಗಳಕರವಾದ ದೇವತಾದೃಷ್ಟಿ ಇಲ್ಲದಿರುವಾಗ ಮಾಡಿದ ಕಾರ್ಯಗಳಿಗೆ ಮಂಗಳಕರವಾದ ಫಲವು ಹೇಗೆ ಉಂಟಾದೀತು. ಸರ್ವಥಾ ಉಂಟಾಗುವದಿಲ್ಲ.[8]

**ಚಾತುರ್ಮಾಸ್ಯ ವಿಧಿ–**

ಈಗ ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಚಾತುರ್ಮಾಸ್ಯ ವಿಧಿಯನ್ನು ಹೇಳುತ್ತೇನೆ ತುಪ್ಪ, ಎಣ್ಣೆ ಮುಂತಾದವುಗಳನ್ನು ಬಿಟ್ಟು ಹಿಂದಿನ ಎಲ್ಲ ಪಾತ್ರೆಗಳನ್ನು ವಿಸರ್ಜಿಸಬೇಕು. ಮೊರ, ಜರಡಿ ಮುಂತಾದವುಗಳನ್ನು ಕೂಡ ನವಮೀ ದಿನ ಶುದ್ಧಿ ಮಾಡಬೇಕು. ಮನೆಯ ಒಳಭಾಗವನ್ನು ಕೂಡ ಗೋಮಯ ಮುಂತಾದವುಗಳಿಂದ ಶಾಸ್ತ್ರವನ್ನು ತಿಳಿದ ವಿದ್ವಾಂಸನು ಶುದ್ಧಿಗೊಳಿಸಬೇಕು.[9]

---

6) ಬ್ರಹ್ಮೋವಾಚ
ಆಷಾಢಸ್ಯ ತು ಮಾಸಸ್ಯ ಸೂರ್ಯೇ ಕರ್ಕಾಟಗೇ ತಥಾ।
ಏಕಾದಶ್ಯಾಂ ಸಿತೇ ಪಕ್ಷೇ ದೇವಾನಾಂ ರಾತ್ರಿರಿಷ್ಯತೇ॥
ತನ್ಮಧ್ಯಗೋ ಮಹಾವಿಷ್ಣುರುಪೇಂದ್ರ ಇತಿ ಸಂಜ್ಞಕಃ।
ಅವಸ್ಥಾತ್ರಯಮಾದಾಯ ನಾನಾಮೂರ್ತಿಭಿರವ್ಯಯಃ॥
ಸಮಸ್ತೈರ್ವಿಬುಧೈಃ ಸ್ತುತ್ಯೋ ಯೋಗನಿದ್ರಾಮುಪೇಯಿವಾನ್।
ಸ್ಕಂದ ಮಹಾಪುರಾಣ

7) ಸಮಸ್ತ ಮಂಗಲಾನಾಂ ಚ ದೇವತಾ ಚ ಜನಾರ್ದನಃ।
ತಸ್ಮಿಂಸ್ತು ಶಯನಂ ಯಾತೇ ನೋದ್ವಾಹಾದಿಕ್ರಿಯಾಭವೇತ್।
ಚೌಲೋಪನಯನೇ ಚೈವ ವಿವಾಹಾದ್ಯಂ ತ್ಯಜೇದ್ಬುಧಃ॥ ಸ್ಕಂದ ಮಹಾಪುರಾಣ

8) ಅಜ್ಞಾನಾದ್ಯದಿ ಕುರ್ವಂತಿ ಮೃತಿಸ್ತೇಷಾಂ ನ ಸಂಶಯಃ।
ಕಲ್ಯಾಣದೇವತಾದೃಷ್ಟಿಹೀನಾನಾಂತು ಕುತಸ್ಸುಖಂ॥ ಸ್ಕಂದ ಮಹಾಪುರಾಣ

9) ಚಾತುರ್ಮಾಸ್ಯ ವಿಧಿಂ ವಕ್ಷ್ಯೇ ಶ್ರುತಿಸ್ಮೃತ್ಯುದಿತಂ ಶುಭಂ।
ಪೂರ್ವಭಾಂಡಾನಿ ಸರ್ವಾಣಿ ರಸಭಾಂಡವಿವರ್ಜಿತಂ॥
ವಿಸರ್ಜಯೇನ್ನವಮ್ಯಾಂತು ಶೂರ್ಪಾದೀನ್ ಶೋಧಯೇತ್ತಥಾ।
ಗೋಮಯಾದ್ಯುಪಲೇಪೇನ ಶುದ್ಧಿಂ ಕೃತ್ವಾ ವಿಚಕ್ಷಣಃ॥ ಸ್ಕಂದ ಮಹಾಪುರಾಣ

ಬಟ್ಟೆಗಳು, ಕಂಬಳಿಗಳು, ಚಾಪೆಗಳು, ಹಾಸಿಗೆ ದಿಂಬುಗಳು, ಸಹಿತವಾಗಿ ಸಚೇಲ ಸ್ನಾನಮಾಡಬೇಕು.[10]

ನವಮಿಯ ದಿನ ಈ ವಿಧಾನಗಳೆಲ್ಲಾ ಪೂರೈಸಿ, ಮಂಗಳಕರವಾದ ದಶಮಿಯ ದಿನ ಬೆಳಿಗ್ಗೆ ಎದ್ದು ಸ್ನಾನಮಾಡಿ ನಿತ್ಯಾಹ್ನಿಕಗಳನ್ನು ಪೂರೈಸಬೇಕು- ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟು ಭಗವನ್ನಿಷ್ಠನಾಗಿ ಕೆಲಸ ಮಾಡಬೇಕು. ದೇವರಿಗೆ ಉದ್ವರ್ತನವನ್ನು ಮಾಡಬೇಕು. (ಉದ್ವರ್ತನವೆಂದರೆ ಸುವಾಸನೆಯ ಹಿಟ್ಟು, ಇತರ ಸುಗಂಧ ದ್ರವ್ಯಗಳಿಂದ ತಿಕ್ಕುವದು) ಅಂದರೆ ಪ್ರತಿಮಾದಿಗಳನ್ನು ತಿಕ್ಕಿ ತೊಳೆದು ಅಭಿಷೇಕಮಾಡಬೇಕು. ಅನಂತರ ದೇವರ ಮಂಡಪವನ್ನು ಸುಂದರವಾಗಿ ಅಲಂಕರಿಸಬೇಕು.[11]

ನಂತರ ಶಾಸ್ತ್ರೋಕ್ತವಾಗಿ ಪಂಚಗವ್ಯ ಮೇಲನ ಮಾಡಿ ಪ್ರಾಶನವನ್ನು ಮಾಡಬೇಕು. ಇದರಿಂದ ಶರೀರದ ಶುದ್ಧಿಯನ್ನು ಮಾಡಿಕೊಳ್ಳಬೇಕು. ಆಮೇಲೆ ಶಾಸ್ತ್ರೋಕ್ತವಾಗಿ ದೇವದೇವೋತ್ತಮನಾದ ಸಂಸಾರನಾಶಕನಾದ ಕಂಸಾರಿಯನ್ನು ಪೂಜಿಸಿ ನೈವೇದ್ಯಾದಿಗಳನ್ನು ಸಮರ್ಪಿಸಬೇಕು. ಅನಂತರ ನೈಮಿತ್ತಿಕ, ಕಾಮ್ಯ, ನಿತ್ಯಗಳೆಂಬುದಾಗಿ ಮೂರು ವಿಧವಾದ, ಚಾತುರ್ಮಾಸದಲ್ಲಿ ಮಾಡಬೇಕಾದ ವ್ರತಗಳ ಸಂಕಲ್ಪವನ್ನು ಮಾಡಬೇಕು. ಮುಂದೆ ಹೇಳುವ ವ್ರತಗಳೆಲ್ಲವೂ ನಾಲ್ಕು ಆಶ್ರಮಗಳಲ್ಲಿರುವವರಿಗೂ ಅನ್ವಯಿಸುತ್ತವೆ.[12]

ಮೊದಲನೆಯ ತಿಂಗಳಲ್ಲಿ ನಿತ್ಯವ್ರತವಾದ ಮಂಗಳಕರವಾದ ಶಾಕವ್ರತವನ್ನು ಮಾಡಬೇಕು. ಎರಡನೆಯ ತಿಂಗಳಲ್ಲಿ ಶ್ರೇಷ್ಠವಾದ ದಧಿ ವ್ರತವನ್ನು ಮಾಡಬೇಕು. ಮೂರನೆಯ ತಿಂಗಳಲ್ಲಿ ಕ್ಷೀರವ್ರತವನ್ನು ಮಾಡಬೇಕು. ನಾಲ್ಕನೆಯ ತಿಂಗಳಲ್ಲಿ ದ್ವಿದಳಧಾನ್ಯಗಳನ್ನೂ ಬಹುಬೀಜವುಳ್ಳ ಫಲಾದಿಗಳನ್ನು ಬಿಡಬೇಕು. ಬ್ರಾಹ್ಮಣಶ್ರೇಷ್ಠನೇ! ಈ ವ್ರತಗಳೆಲ್ಲವೂ ನಿತ್ಯವೆಂಬುದಾಗಿ ಜ್ಞಾನಿಗಳು ಹೇಳುತ್ತಾರೆ. ನಿಂಬೆಹಣ್ಣು, ಅಲಸಂದೆ, ತೊಗರಿ, ದೊಡ್ಡ ಹೆಸರು, ಇನ್ನೂ ಇತರ ಅಭಕ್ಷ್ಯವಾದ ಶಾಕಗಳನ್ನು ಚಾತುರ್ಮಾಸದಲ್ಲಿ

---

10) ಅಭ್ಯಂತರಂ ಗೃಹಸ್ಯೈವ ವಾಸೋಭಿಃ ಕಂಬಲೈಸ್ತಥಾ।
ಕಟ್ಟೈಶ್ಚ ಕಶುಭಿಶ್ಚೈವ ಸಚೇಲಂ ಸ್ನಾನಮಾಚರೇತ್॥ ಸ್ಕಂದ ಮಹಾಪುರಾಣ

11) ತತಃ ಪ್ರಾತಃ ಸಮುತ್ಥಾಯ ದಶಮ್ಯಾಂತು ಶುಭೇ ದಿನೇ।
ಸ್ನಾತ್ವಾ ನಿರ್ವರ್ತ್ಯ ಕರ್ಮಾಣಿ ಗೃಹಂಗತ್ವಾ ಜಿತೇಂದ್ರಿಯಃ॥
ದೇವಸ್ಯೋದ್ವರ್ತನಂ ಕುರ್ಯಾದಲಂಕುರ್ಯಾಚ್ಚ ಮಂಡಪಂ॥ಸ್ಕಂದ ಮಹಾಪುರಾಣ

12) ಪಂಚಗವ್ಯಂ ಪ್ರಾಶಯಿತ್ವಾ ಶುದ್ಧಿಂ ಕೃತ್ವಾತನೋರ್ದೃಢಮ್।
ಪೂಜಯಿತ್ವಾ ಯಥಾನ್ಯಾಯಂ ದೇವದೇವಂ ಜನಾರ್ದನಮ್।
ವ್ರತಾನಾಂ ವಕ್ಷಮಾಣಾನಾಂ ಸಂಕಲ್ಪಂ ವಿಧಿವಚ್ಚರೇತ್॥
ನೈಮಿತ್ತಿಕಾನಾಂ ಕಾಮ್ಯಾನಾಂ ನಿತ್ಯಾನಾಂ ಚ ತಥೈವ ಚ ।
ವ್ರತಾನ್ಯೇತಾನಿ ಸರ್ವಾಣಿ ಚತುರಾಶ್ರಮವರ್ತಿನಾಂ॥ ಸ್ಕಂದ ಮಹಾಪುರಾಣ

ಜ್ಞಾನಿಯಾದವನು ಬಿಡಬೇಕು.[13]

**ಶಾಕವ್ರತ**

ಮಂಗಳಕರವಾದ ಶಾಕವ್ರತದಲ್ಲಿ ಹತ್ತು ವಿಧವಾದ ಶಾಕವನ್ನು ವರ್ಜಿಸಬೇಕು. ಎಲೆ, ಹೂವು, ಹಣ್ಣು, ಕಾಂಡ, ಗಡ್ಡೆ, ಮೊಗ್ಗು, ಎಳ್ಳುಹಿಟ್ಟು, ಚಿಗುರು, ಅಣಬೆ, ಮಾಂಸ (ಪ್ರತಿನಿಧಿಯಾದ ಮಾಷ ಉದ್ದು) ಇವು ಹತ್ತನ್ನು ವ್ರತನಿಷ್ಣಾತರಾದವರು ಶಾಕವೆಂದು ಹೇಳುತ್ತಾರೆ. ಮೊದಲನೆಯ ಶಾಕವ್ರತದಲ್ಲಿ ಇವುಗಳನ್ನು ವರ್ಜಿಸಬೇಕು.[14]

**ದ್ವಿದಳ ವ್ರತ :**

ಕಾರ್ತಿಕ ಮಾಸದಲ್ಲಿ ವಿದ್ವಾಂಸನು ದ್ವಿದಲವನ್ನು (ಬೇಳೆಗಳನ್ನು) ಬಹುಬೀಜವುಳ್ಳ ಫಲ ಶಾಕಾದಿಗಳನ್ನು ಬಿಡಬೇಕು. ಮೊಳಕೆಯಿಲ್ಲದೆಯೇ ಯಾವ ಸಸ್ಯಗಳಲ್ಲಿ ಎರಡು ದಲ (ಭಾಗ)ವುಳ್ಳ ಬೀಜವು ಉತ್ಪನ್ನವಾಗಿರುವುದು ಕಾಣಿಸುವುದೋ ಅದನ್ನು ದ್ವಿದಲವೆಂದು ಹೇಳುತ್ತಾರೆ. ಕಲ್ಲಿನಿಂದ ಬೀಜವನ್ನು ಒಡೆದಾಗ (ಬೀಸುವ ಕಲ್ಲಿನಿಂದ ಬೀಸಿದಾಗ) ಯಾವ ಧಾನ್ಯದಲ್ಲಿ ಎರಡು ಬೇಳೆಗಳು (ಭಾಗಗಳು) ಕಾಣಿಸುತ್ತವೆಯೋ ಅದನ್ನು ದ್ವಿದಲವೆಂದು ಹೇಳುತ್ತಾರೆ. ಯಾವ ಯಾವ ಧಾನ್ಯಗಳು ದ್ವಿದಲವೆಂಬುದನ್ನು

---

13) ಪ್ರಥಮೇ ಮಾಸಿ ಕರ್ತವ್ಯಂ ನಿತ್ಯಂ ಶಾಕವ್ರತಂ ಶುಭಂ। ಸ್ಕಂದ ಮಹಾಪುರಾಣ
ದ್ವಿತೀಯೇಮಾಸಿ ಕರ್ತವ್ಯಂ ದಧಿವ್ರತಮನುತ್ತಮಮ್॥

ಪಯೋವ್ರತಂ ತೃತೀಯೇ ತು ಚತುರ್ಥೇಷು ನಿಶಾಮಯ।
ದ್ವಿದಲಂ ಬಹುಬೀಜಂ ಚ ವರ್ಜಯೇತ್ ಶುದ್ಧಿಮಿಚ್ಛತಾ॥ ಸ್ಕಂದ ಮಹಾಪುರಾಣ

ನಿತ್ಯಾನ್ಯೇತಾನಿ ವಿಪ್ರೇಂದ್ರ ವ್ರತಾನ್ಯಾಹುರ್ಮನೀಷಿಣಃ।
ಜಂಬೀರಂ ರಾಜಮಾಷಂ ಚ ತುವರಂ ರಾಜಮುದ್ಗಕಂ॥ ಸ್ಕಂದ ಮಹಾಪುರಾಣ

ಅಭಕ್ಷ್ಯಾಣಿ ಚ ಶಾಕಾನಿ ಚಾತುರ್ಮಾಸ್ಯೇ ತ್ಯಜೇದ್ಬುಧಃ।
ಸ್ಕಂದ ಮಹಾಪುರಾಣ

14) ಶಾಕಂ ದಶವಿಧಂ ಪ್ರೋಕ್ತಂ ವರ್ಜ್ಯಂ ಶಾಕವ್ರತೇ ಶುಭೇ।
ಪತ್ರಂ ಪುಷ್ಪಂ ಫಲಂ ನಾಲಂ ಮೂಲಂ ಕುಡ್ಮಲಮೇವ ಚ॥

ತಿಲಪಿಷ್ಟಂ ಪಲ್ಲವಂ ಚ ಛತ್ರಾಕಂ ಚಾಮಿಷಂ ತಥಾ।
ಶಾಕಂ ದಶವಿಧಂ ಪ್ರೋಕ್ತಂ ವ್ರತಂ ಕರ್ಮಸು ನಿಷ್ಠಿತೈಃ॥
ಸ್ಕಂದ ಮಹಾಪುರಾಣ

ಹೇಳುತ್ತೇನೆ ಕೇಳು.[15]

ಉದ್ದು, ಹೆಸರು, ಕಡಲೆ, ಮಸೂರಧಾನ್ಯ, ಹುರುಳಿ, ಅವರೆ, ತೊಗರಿ, ಅಲಸಂದೆ, ದೊಡ್ಡಹೆಸರು, ಹುಣಸೆಹಣ್ಣು, ನಖಪಂಚಕ (ಪಂಚನಖವುಳ್ಳ ಪ್ರಾಣಿಗಳು ಮೊಲ, ಮುಳ್ಳಹಂದಿ, ಉಡ, ಖಡ್ಗಮೃಗ, ಆಮೆ ಇವು ಪಂಚನಖಿಗಳು, ಇವುಗಳ ಸ್ವೀಕಾರ ಇತರ ಯುಗಗಳ ವಿಷಯ. ಕಲಿಯುಗದಲ್ಲಿ ಇವು ನಿಷಿದ್ಧ. ಇದನ್ನು ಚಾತುರ್ಮಾಸ್ಯದಲ್ಲಿ ವರ್ಜಿಸಬೇಕು). ಹಿಂದೆ ಹೇಳಿದ ವಸ್ತುಗಳು ಹೊಸದಾಗಿರಲಿ, ಹಳೆಯದಾಗಿರಲಿ, ಅವುಗಳನ್ನು ವರ್ಜಿಸಬೇಕು. ನಾರದನೇ! ನಾಲದಲ್ಲಿ (ಕಾಂಡದಲ್ಲಿ), ಫಲದಲ್ಲಿ ಎಲ್ಲಿ ಬಹಳ ಬೀಜಗಳು ಕಾಣಿಸುತ್ತವೋ–ಅವುಗಳನ್ನು, ಸೊಪ್ಪು, ಕೀರೇಸೊಪ್ಪು, ಮುಂತಾದವನ್ನು ಬಹುಬೀಜವೆಂದು ಹೇಳುತ್ತಾರೆ.[16]

ಕಾರ್ತಿಕ ಮಾಸದಲ್ಲಿ ಪ್ರಾತಃಸ್ನಾನ, ಮತ್ತು ದೀಪದಾನ ಇವುಗಳನ್ನು ವಿಶೇಷವಾಗಿ ಮಾಡಬೇಕು. ಪ್ರಬೋಧಿನೀ ಏಕಾದಶಿಯದಿನ (ಕಾರ್ತಿಕ ಶುಕ್ಲ ಏಕಾದಶೀ) ಜಿತೇಂದ್ರಿಯನಾಗಿ ಜಾಗರಣ ಮಾಡಬೇಕು–ಗುರುಗಳಿಗೆ ಹಸು, ಎತ್ತುಗಳನ್ನು ದಾನ ಮಾಡಿ ದ್ವಾದಶಿಯ ದಿನ ಭೋಜನ ಮಾಡಿಸಬೇಕು ಸಾಯಂಕಾಲದ ವರೆಗೂ ಪುರಾಣಾದಿ ಸತ್ಕಥೆಯಿಂದ ಹಗಲಿನ ಉಳಿದ ಭಾಗವನ್ನು ಕಳೆಯಬೇಕು.[17]

---

15) ಕಾರ್ತಿಕ್ಯಾಂ ವರ್ಜಯೇದ್ವಿದ್ವಾನ್ ದ್ವಿದಲಂ ಬಹುಬೀಜಕಂ।
ಬೀಜಮೇವ ಸಮುದ್ಭೂತಂ ದ್ವಿದಲಂ ಚಾಂಕುರಂ ವಿನಾ॥
ದೃಶ್ಯತೇ ಯತ್ರ ಸಸ್ಯೇಷು ದ್ವಿದಲಂ ಸದ್ಭಿರುಚ್ಯತೇ।
ಶಿಲಯಾ ಭಿದ್ಯಮಾನೇ ದ್ವಿದಲಂ ಯತ್ರ ದೃಶ್ಯತೇ॥
ದ್ವಿದಲಂ ತದ್ಧಿ ವಿಜ್ಞೇಯಂ ತನ್ಮೇ ನಿಗದತಂ ಶೃಣು॥ ಸ್ಕಂದ ಪುರಾಣ

16) ಮಾಷಂ ಚ ಮುದ್ಗಕಂ ಚೈವ ಚಣಕಂ ಚ ಮಸೂರಕಂ।
ಕುಲಿತ್ಥಂ ಚೈವ ನಿಷ್ಪಾವಂ ಆಢಕಂ ರಾಜಮಾಷಕಂ॥
ರಾಜಮುದ್ಗಂ ತಿಂತ್ರಿಣೀ ಚ ತಥಾ ವೈ ನಖಪಂಚಕಂ।
ನೂತನಾನ್ಯಥ ಜೀರ್ಣಾನಿ ಸರ್ವಾಣ್ಯೇತಾನಿ ವರ್ಜಯೇತ್॥
ನಾಲೇ ಫಲೇ ವೈ ದೃಶ್ಯಂತೇ ಬಹುಬೀಜಾನಿ ನಾರದ।
ಬಹು ಬೀಜಂ ತದಿತ್ಯಾಹುಃ ಪತ್ರಕೀರಾದಿಕಂ ತಥಾ॥ ಸ್ಕಂದ ಪುರಾಣ

17) ಪ್ರಾತಃ ಸ್ನಾನಂ ದೀಪದಾನಂ ಕಾರ್ತಿಕ್ಯಾಂತು ವಿಶೇಷತಃ।
ಜಾಗರಂತು ಪ್ರಬೋಧಿನ್ಯಾಂ ಕುರ್ಯಾದ್ವೈನಿಯತೇಂದ್ರಿಯಃ।
ಗುರೋರ್ಗೋಮಿಥುನಂ ದತ್ವಾ ದ್ವಾದಶ್ಯಾಂ ಭೋಜಯೇತ್ ದ್ವಿಜಾನ್।
ಆಸಾಯಾಹ್ನಂ ಪುರಾಣಾದ್ಯೈರಹಃ ಶೇಷಂ ನಯೇದ್ ಬುಧಃ॥ಸ್ಕಂದ ಪುರಾಣ

ಸೂರ್ಯನು ಅಸ್ತಂಗತನಾಗುವ ಸಮಯದಲ್ಲಿ ಪುನಃ ಶಾಸ್ತ್ರೋಕ್ತವಾಗಿ ಸ್ನಾನಮಾಡಿ ತುಲಸೀ ವೃಂದಾವನದಲ್ಲಿ ಚೌಕ ಮಂಟಪವನ್ನು ರಚಿಸಬೇಕು. ಆ ಮಂಟಪಕ್ಕೆ ಬಾಳೆಯ ಗಿಡಗಳನ್ನು ಕಟ್ಟಿ ಅಲಂಕಾರ ಮಾಡಬೇಕು. ಹೂವಿನ ಮಾಲೆಗಳು, ದಿವ್ಯವಾದ ಟೆಂಗಿನಕಾಯಿ, ಇತರ ಹಣ್ಣುಗಳನ್ನು ಅಡಿಕೆಯ ಗೊನೆ, ಕಬ್ಬು ಮುಂತಾದವುಗಳಿಂದಲೂ ಆ ಮಂಟಪವನ್ನು ಚೆನ್ನಾಗಿ ಅಲಂಕರಿಸಬೇಕು.[18]

ಅಲ್ಲಿ ಕ್ಷೀರಸಮುದ್ರಶಯನನಾದ ಸರ್ವದೇವೋತ್ತಮನಾದ, ಶ್ರೀಮನ್ನಾರಾಯಣನನ್ನು ನಾನಾ ವಿಧ ಉಪಚಾರಗಳಿಂದಲೂ, ಸಂಗೀತ, ವಾದ್ಯ, ನರ್ತನಗಳಿಂದಲೂ ಪೂಜಿಸಬೇಕು. ತಾಳಗಳನ್ನು ಬಾರಿಸುತ್ತ ಮಾರ್ಗನೃತ್ಯವನ್ನು, ನೃತ್ಯಗಳಿಂದ ಹುಟ್ಟಿರುವ ನಾಟ್ಯವನ್ನೂ, ವಸಂತಗೀತವನ್ನು, ಚಕ್ರಧಾರಿಯಾದ ಶ್ರೀಹರಿಯ ಎದುರಿಗೆ ನಡೆಸಬೇಕು. ಮಹಾರಾಜೋಪಚಾರಗಳಿಂದ ಗರುಡಧ್ವಜನಾದ ಶ್ರೀಹರಿಯನ್ನು ಪೂಜಿಸಬೇಕು. ಭಗವಂತನ ಪ್ರಸಾದರೂಪವಾದ ಉಪಾಹಾರಗಳಿಂದಲೂ, ದಕ್ಷಿಣೆಗಳಿಂದಲೂ, ವ್ರತನಿಷ್ಠರಾದ ಬ್ರಾಹ್ಮಣೋತ್ತಮರನ್ನು ಬಹಳ ಭಕ್ತಿಯಿಂದ ಸಂತೋಷಗೊಳಿಸಬೇಕು. ಅವರಿಂದ ಆಶೀರ್ವಚನವನ್ನು ಸ್ವೀಕರಿಸಬೇಕು, ಇದೆಲ್ಲವನ್ನೂ ಸರ್ವೋತ್ತಮನಾದ ಶ್ರೀಮನ್‌ಮಹಾವಿಷ್ಣುವಿಗೆ ಅರ್ಪಿಸಬೇಕು.[19]

ಅನಂತರ ಹುಣ್ಣಿಮೆ ದಿನದಲ್ಲಿ ನೆಲ್ಲಿ ಮರದಿಂದ ಅಲಂಕೃತವಾದ ವನಪ್ರದೇಶಕ್ಕೆ ಹೋಗಬೇಕು. ಅಲ್ಲಿ ಕಾರ್ತಿಕದಾಮೋದರ ಎಂಬ ಹೆಸರುಳ್ಳ ಶ್ರೀಹರಿಯನ್ನು ಪೂಜಿಸಿ ಚಿತ್ರಾನ್ನಗಳ ನೈವೇದ್ಯದಿಂದ ಸಂತೋಷಪಡಿಸಬೇಕು. ಶಾಸ್ತ್ರವನ್ನು ಬಲ್ಲ ವಿದ್ವಾಂಸನು

---

18) ಅಸ್ತಂಗತೇ ದಿನಕರೇ ಪುನಃ ಸ್ನಾತ್ವಾ ಯಥಾವಿಧಿ।
ವೃಂದಾವನೇ ತತಃ ಕುರ್ಯಾನ್ಮಂಡಪಂ ಚತುರಸ್ರಕಂ॥
ಪುಷ್ಪಮಾಲ್ಯೈಃ ಫಲೈರ್ದಿವ್ಯೈರ್ನಾಲಿಕೇರಾದಿಭಿಃ ಶುಭೈಃ।
ಪೂಗೀಫಲೈರಿಕ್ಷುದಂಡೈಃ ರಂಭಾಸ್ತಂಭೈಶ್ಚ ಶೋಭಿತಂ॥ ಸ್ಕಂದ ಪುರಾಣ

19) ಪೂಜಯೇತ್ತತ್ರದೇವೇಶಂ ಕ್ಷೀರಾಂಬುಧಿನಿವಾಸಿನಂ।
ನಾನಾ ವಿಧೈಶ್ಚೋಪಚಾರೈರ್ಗೀತ ವಾದಿತ್ರ ನರ್ತನೈಃ॥
ಮಾರ್ಗತಾಲಾನಿ ಸರ್ವಾಣಿ ನೃತ್ಯಂ ನಾಟ್ಯಂ ತದುದ್ಭವಂ।
ವಸಂತಂ ಶ್ರಾವಯೇದ್ಗೀತಂ ವಿಷ್ಣೋರ್ದೇವಸ್ಯಚಕ್ರಿಣಃ॥
ಮಹಾರಾಜೋಪಚಾರೇಣ ತಂ ಭಜೇದ್ಗರುಡಧ್ವಜಂ।
ನಿವೇದಿತೈಶ್ಚೋಪಹಾರೈರ್ದಕ್ಷಿಣಾಭಿರ್ದ್ವಿಜೋತ್ತಮಾನ್॥
ಸಂತೋಷಯೇನ್ಮಹಾಭಕ್ತ್ಯಾ ವೈಷ್ಣವಾನ್ ಭಾವಿತವ್ರತಾನ್।
ಆಶಿಷಃ ಪ್ರತಿಗೃಹ್ಣೀಯಾತ್ ತತ್‌ಸರ್ವಂ ವಿಷ್ಣವೇಽರ್ಪಯೇತ್॥ ಸ್ಕಂದ ಪುರಾಣ

ಅಲ್ಲಿ ಕಲ್ಪೋಕ್ತವಿಧಾನದಿಂದ ಧಾತ್ರೀಹೋಮವನ್ನು ಮಾಡಬೇಕು. ಹೋಮ, ದೇವಾಪೂಜಾನಂತರದಲ್ಲಿ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ನಂತರ ಬಂಧು ಸಹಿತನಾಗಿ ತಾನೂ ಭೋಜನ ಮಾಡಬೇಕು.[20]

ಈ ವ್ರತವು ಬಹಳ ಪುಣ್ಯಕರವಾದುದು. ಪರಮ ಮಂಗಳಕರವಾದುದು. ಸರ್ವಪಾಪಗಳನ್ನು ನಾಶಮಾಡುವಂತಹದು. ಭಕ್ತರು ಮಾಡಿದ, ಮಾಡಿರಬಹುದಾದ ಎಲ್ಲ ಉಪದ್ರವಗಳನ್ನು ನಾಶಮಾಡುತ್ತದೆ. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ ಎಂಬ ನಾಲ್ಕೂ ಆಶ್ರಮದವರು ಅವಶ್ಯವಾಗಿ ಅನುಷ್ಠಾನ ಮಾಡಬೇಕಾದುದು. ಇದು ನೈಮಿತ್ತಿಕ ವ್ರತವು. [21]

*****

---

20) ತತಸ್ತು ಪೌರ್ಣಮಾಸ್ಯಾಂತು ಧಾತ್ರೀ ವೃಕ್ಷೋಪಶೋಭಿತೇ।
ವನೇ ದಾಮೋದರಂ ವಿಷ್ಣುಂ ಚಿತ್ರಾನ್ನೈಸ್ತೋಷಯೇದ್ವಿಭುಂ॥
ಕಲ್ಪೋಕ್ತವಿಧಿನಾ ತತ್ರ ಹೋಮಂ ಕುರ್ಯಾದ್ವಿಚಕ್ಷಣಃ।
ಬ್ರಾಹ್ಮಣಾನ್ ಭೋಜಯೇತ್ ಪಶ್ಚಾತ್ ಸ್ವಯಂ ಭುಂಜೀತ ಬಂಧುಭಿಃ॥
ಸ್ಕಂದ ಪುರಾಣ

21) ಇದಂ ವ್ರತಂ ಮಹಾಪುಣ್ಯಂ ಸರ್ವೋಪದ್ರವನಾಶನಂ।
ಇದಂ ನೈಮಿತ್ತಿಕಂ ಪ್ರಾಹುಶ್ಚತುರಾಶ್ರಮವರ್ತಿನಾಂ॥
ಸ್ಕಂದ ಪುರಾಣ

# ಚಾತುರ್ಮಾಸ್ಯದಲ್ಲಿ ಆಚರಿಸಬಹುದಾದ ವ್ರತಗಳು

1) ಪರಾಕ- ಹನ್ನೆರಡುದಿನ ಉಪವಾಸವಿದ್ದು ಮಾಡುವ, ಸರ್ವಪಾಪಗಳಿಗೂ ಪ್ರಾಯಶ್ಚಿತ್ತ ರೂಪವಾದ ವ್ರತ.

2) ಷಷ್ಠಕಾಲ-ಆರುದಿನಗಳಿಗೊಮ್ಮೆ ಭೋಜನ ಅಥವಾ ಆರುಹೊತ್ತಿಗೆ ಅಂದರೆ ಮೂರು ದಿನಕ್ಕೊಮ್ಮೆ ಭೋಜನ ಮಾಡುವ ವ್ರತ.

3) ಧಾರಣಪಾರಣ-ಒಂದುದಿನ ಉಪವಾಸ ಮರುದಿನ ಭೋಜನ ಹೀಗೆ ಒಂದು ತಿಂಗಳಕಾಲ ಕ್ರಮವಾಗಿ ನಡೆಯುವ ವ್ರತ.

4) ಲಕ್ಷವರ್ತೀ ವ್ರತ- ಒಂದು ಲಕ್ಷ ಬತ್ತಿಗಳನ್ನು ಮಾಡಿ ದೇವರಿಗೆ ದೀಪ ಹಚ್ಚುವದು.

5) ಭೀಷ್ಮಪಂಚಕ ಉಪವಾಸ - ಕಾರ್ತಿಕ ಶುದ್ಧ ಏಕಾದಶಿಯಿಂದ ಆರಂಭಿಸಿ ಐದು ದಿನಗಳ ಕಾಲ ಉಪವಾಸಮಾಡುವದು.

6) ಲಕ್ಷ ನಮಸ್ಕಾರ ವ್ರತ-ಒಂದು ಲಕ್ಷ ನಮಸ್ಕಾರ ಮಾಡುವ ವ್ರತ

7) ಲಕ್ಷ ಪ್ರದಕ್ಷಿಣ ವ್ರತ-ಒಂದು ಲಕ್ಷ ಪ್ರದಕ್ಷಿಣ ಹಾಕುವ ವ್ರತ

ಇವೆಲ್ಲ ಕಾಮ್ಯವ್ರತಗಳು ಅಂದರೆ ಫಲಾಸೆಯಿಂದ ಮಾಡುವ ವ್ರತಗಳು. ಆದರೆ ಇವುಗಳನ್ನು ಭಗವಂತನ ಪ್ರೀತ್ಯರ್ಥವಾಗಿ ಮಾಡಿದರೆ ಅವನ ಅನುಗ್ರಹ ಉಂಟಾಗುತ್ತದೆ.[22]

ಚಾತುರ್ಮಾಸ್ಯ ವ್ರತ ಸಮಯದಲ್ಲಿ ರಂಗವಲ್ಲೀ ಪುಡಿಯನ್ನು ಮಾಡಬಾರದು ತುಲಸೀಗಿಡವನ್ನು ಚಾತುರ್ಮಾಸ್ಯದಲ್ಲಿ ನೆಡಬಾರದು. (ಚಾತುರ್ಮಾಸ್ಯಕ್ಕಿಂತ ಹಿಂದೆಯೇ ತುಲಸೀಗಿಡ ನೆಟ್ಟಿರಬೇಕು) ಎಲೈ ನಾರದನೇ! ಎಲ್ಲವನ್ನೂ ನಿನಗೆ ಹೇಳಿದ್ದೇನೆ.[23] (ಬ್ರಹ್ಮದೇವರು ಹೇಳುವಮಾತಿದು)

ಈ ಚಾತುರ್ಮಾಸ್ಯದ ನಾಲ್ಕು ತಿಂಗಳ ವ್ರತವು ಕಡ್ಡಾಯವಾದುದು. ಅವಶ್ಯವಾಗಿ ಮಾಡಬೇಕಾದುದು. ಹೆಂಗಸರು, ಗಂಡಸರು, ಬ್ರಹ್ಮಚಾರ್ಯಾದಿ ನಾಲ್ಕು ಆಶ್ರಮಗಳಲ್ಲಿರತಕ್ಕವರು ಮಾಡಬೇಕು.[24]

---

22) ಪರಾಕಂ ಷಷ್ಠಕಾಲಂ ಚ ತಥಾ ಧಾರಣ ಪಾರಣಂ।
ಲಕ್ಷವರ್ತೀ ವ್ರತಂ ಚೈವ ಭೀಷ್ಮಪಂಚಕಮೇವ ಚ॥
ತಥಾ ಲಕ್ಷನಮಸ್ಕಾರವ್ರತಂ ಲಕ್ಷಪ್ರದಕ್ಷಿಣಂ।
ಚಾತುರ್ಮಾಸ್ಯೇ ವ್ರತಾನ್ಯಾಹುರೇತತ್ಕಾಮ್ಯಮಿತೀರಿತಂ॥

23) ರಂಗವಲ್ಯಾಶ್ಚ ನಿಕ್ಷೇಪಂ ಚಾತುರ್ಮಾಸ್ಯೇ ನ ಕಾರಯೇತ್।
ತುಲಸ್ಯೋಪ್ತಂ ನೈವಕುರ್ಯಾತ್ ಸರ್ವಮೇತತ್ ತವೋದಿತಂ॥

24) ನಿತ್ಯಂ ಕಾರ್ಯಂ ಚ ಸರ್ವೇಷಾಮೇತದ್ ವ್ರತ ಚತುಷ್ಟಯಂ।
ನಾರೀಭಿಶ್ಚ ನರೈರ್ವಾಪಿ ಚತುರಾಶ್ರಮ ವರ್ತಿಭಿಃ।

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಇತರ ವ್ರತನಿಷ್ಠರಾದವರು, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಕುಟೀಚಕ, ಬಹೂದಕ, ಹಂಸ, ಪರಮಹಂಸ ಇವರಲ್ಲಿ ಯಾರೇ ಆದರೂ ಈ ವ್ರತವನ್ನು ಮಾಡದಿದ್ದರೆ ನರಕವನ್ನು ತಪ್ಪಿಸಿಕೊಳ್ಳಲಾರರು.[25]

**ಚಾತುರ್ಮಾಸ್ಯ ಕಾಲದಲ್ಲಿ ಮಾಡಬಹುದಾದ ಕಾಮ್ಯವ್ರತಗಳು ಹೀಗಿವೆ–ಅವುಗಳ ಫಲಗಳನ್ನು ಕೆಳಗೆ ಕೊಟ್ಟಿದೆ–**

1) ಬೆಲ್ಲ ಬಿಡುವುದರಿಂದ ಇಂಪಾದ ಕಂಠಧ್ವನಿ
2) ಎಣ್ಣೆ ಬಿಡುವುದರಿಂದ ಸುಂದರಾಂಗತೆ
3) ಯೋಗಾಭ್ಯಾಸದಿಂದ ಬ್ರಹ್ಮಪದ ಪ್ರಾಪ್ತಿ
4) ತಾಂಬೂಲತ್ಯಾಗದಿಂದ ಸುಖಭೋಗ
5) ಘೃತ (ತುಪ್ಪ) ತ್ಯಾಗದಿಂದ ಆಕರ್ಷಕ ಸುಂದರದೇಹ
6) ಶಾಕತ್ಯಾಗದಿಂದ ಪಕ್ವಾನ್ನ ಭೋಜನ
7) ಮೊಸರು ಮಜ್ಜಿಗೆ ಹಾಲು ತ್ಯಾಗದಿಂದ ವಿಷ್ಣುಲೋಕ ಪ್ರಾಪ್ತಿ
8) ಭೂಶಯನ (ನೆಲದಲ್ಲಿ ಮಲಗುವದು) ಮಾಡುವುದರಿಂದ ರಾಜತ್ವಪ್ರಾಪ್ತಿ
9) ಧಾರಣೀಪಾರಣೀ ವ್ರತದಿಂದ ಬ್ರಹ್ಮಲೋಕತ್ವ ಪ್ರಾಪ್ತಿ
10) ನಖ, ಕೇಶಾದಿ ಧಾರಣದಿಂದ ಪ್ರತಿದಿನ ಗಂಗಾಸ್ನಾನಫಲ
11) ಮೌನದಿಂದ ಅಜ್ಞಾಧಾರಕತ್ವ
12) ಭಗವಂತನಿಗೆ ವಂದನೆಯಿಂದ ಗೋದಾನದ ಫಲ.
13) ಭಗವಂತನಿಗೆ ನಿತ್ಯ 108 ಪ್ರದಕ್ಷಿಣೆ ಮಾಡುವುದರಿಂದ ವಿಷ್ಣುಲೋಕಪ್ರಾಪ್ತಿ.
14) ಒಂದು ಹೊತ್ತು ಭೋಜನದಿಂದ ಅಗ್ನಿಹೋತ್ರ ಫಲ
15) ಆಯಾಚಿತ ವ್ರತದಿಂದ ಬಾವಿ, ಕೆರೆಕಟ್ಟಿಸಿದ ಫಲ
16) ಎಲೆಯಲ್ಲಿ ಭೋಜನದಿಂದ ಕುರುಕ್ಷೇತ್ರವಾಸ ಫಲ
17) ಶಿಲೆಯಲ್ಲಿ ಭೋಜನದಿಂದ ಪ್ರಯಾಗ ಸ್ನಾನ ಫಲ

ಈ ರೀತಿ ನಾಲ್ಕು ತಿಂಗಳಿನಲ್ಲಿ ಮಾಡುವ ವ್ರತ ಸಂಕಲ್ಪವನ್ನು ಆಷಾಢ ಏಕಾದಶಿದಿನ ಮಾಡಿ ಕಾರ್ತಿಕ ದ್ವಾದಶಿದಿನದಂದು ಮುಗಿಸಬೇಕು. ಎಲ್ಲ ಈ ವ್ರತಗಳ ಉದ್ಯಾಪನೆಯನ್ನು ಹೋಮ, ಹವನ ಪುರಃಸ್ಸರವಾಗಿ ದಂಪತಿ ಭೋಜನ, ವಸ್ತ್ರದಾನಗಳನ್ನು ಕಾರ್ತಿಕ ಪೌರ್ಣಿಮೆಯಂದು ಮಾಡತಕ್ಕದ್ದು.

---

25) ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಸ್ತ್ರಿಯಃ ಶೂದ್ರೋ ವ್ರತೀತಥಾ।
ಗೃಹೀ ವನಸ್ಥಃ ಕುಟೀಚೋ ಬಹೂದಃ ಪರಮಹಂಸಕಃ।
ನರಕಾನ್ನ ನಿವರ್ತಂತೇ ತ್ಯಕ್ತ್ವಾ ವ್ರತಚತುಷ್ಟಯಮ್॥

ಆಷಾಢ ಶುದ್ಧ ಏಕಾದಶಿ ದಿನದಂದು ತಮ್ಮ ತಮ್ಮ ಪೀಠಾಧಿಪತಿಗಳಿಂದ ತಪ್ತ ಮುದ್ರಾಧಾರಣೆ ಮಾಡಿಸಿಕೊಂಡು ದೇವರಿಗೆ ವಿಶೇಷ ಪೂಜೆ ಸಲ್ಲಿಸಬೇಕು.

*****

## ಚಾತುರ್ಮಾಸ್ಯ ವ್ರತ ಪ್ರಾರ್ಥನೆ

ಆಚಮನ ಪ್ರಾಣಾಯಾಮ ಸಂಕಲ್ಪ ಮಾಡಿ ಕೆಳಗಿನ ಮಂತ್ರ ಪಠಿಸಿ ದೇವರಿಗೆ ಪ್ರಾರ್ಥನೆ ಸಲ್ಲಿಸಬೇಕು.

ಸುಪ್ತೇ ತ್ವಯಿ ಜಗನ್ನಾಥ ಜಗತ್ಸುಪ್ತಂ ಭವೇದಿದಂ।
ವಿಬುದ್ಧೇ ತ್ವಯಿ ಬುಧ್ಯೇತ ತತ್ಸರ್ವಂ ಸಚರಾಚರಂ॥

ಚತುರೋ ವಾರ್ಷಿಕಾನ್ಮಾಸಾನ್ ದೇವಸ್ಯೋತ್ಥಾಪನಾವಧಿ।
ಶ್ರಾವಣೇ ವರ್ಜಯೇ ಶಾಕಂ ದಧಿ ಭಾದ್ರಪದೇ ತಥಾ॥

ದುಗ್ಧಮಾಶ್ವಯುಜೇ ಮಾಸಿ ಕಾರ್ತಿಕೇ ದ್ವಿದಲಂ ತಥಾ।
ಇಮಂ ಕರಿಷ್ಯೇ ನಿಯಮಂ ನಿರ್ವಿಘ್ನಂ ಕುರುಮೇಽಚ್ಯುತ॥

ಇದಂ ವ್ರತಂ ಮಯಾದೇವ ಗೃಹೀತಂ ಪುರತಸ್ತವ।
ನಿರ್ವಿಘ್ನಂ ಸಿದ್ಧಿಮಾಯಾತು ಪ್ರಸಾದಾತ್ ತೇ ರಮಾಪತೇ॥

ಗೃಹೀತೇಽಸ್ಮಿನ್ ವ್ರತೇ ದೇವ ಪಂಚತ್ವಂ ಯದಿ ಮೇ ಭವೇತ್।
ತದಾಭವತು ಸಂಪೂರ್ಣಂ ಪ್ರಸಾದಾತ್ ತೇ ಜನಾರ್ದನ॥

ಈ ಮಂತ್ರ ಪಠಿಸುತ್ತ ಶಂಖದಿಂದ ದೇವರಿಗೆ ಅರ್ಘ್ಯಕೊಡಬೇಕು. ಹೀಗೆ ಚಾತುರ್ಮಾಸ್ಯವ್ರತ ಸಂಕಲ್ಪಮಾಡಿ ನಂತರ ಮಂಚದಲ್ಲಿ ವಿಷ್ಣುವಿನ ಪ್ರತಿಮೆ ಮಲಗಿಸಿ ವಿಶೇಷಪೂಜೆ ಮಾಡಬೇಕು, ರಾತ್ರಿ ಜಾಗರಣೆ ಮಾಡಬೇಕು.

ದ್ವಾದಶೀ ದಿನ ಬೆಳಿಗ್ಗೆ ಪುನಃ ಶ್ರೀಹರಿಯನ್ನು ಪೂಜಿಸಿ ಪಾರಣೆಮಾಡಬೇಕು. ತ್ರಯೋದಶೀ ದಿನವೂ ವಾದ್ಯಾದಿಗಳಿಂದ ಪೂಜಿಸಬೇಕು.

*****

16

# ಚಾತುರ್ಮಾಸ್ಯ ಕುರಿತಂತೆ ತಿಳಿಯಬೇಕಾದ ಅಂಶಗಳು

1) **ಚಾತುರ್ಮಾಸ್ಯದ ಅಭಿಮಾನಿದೇವತೆಗಳು**

ಶ್ರೀಧರಶ್ಚ ಹೃಷೀಕೇಶಃ ಪದ್ಮನಾಭಸ್ತ್ರತೀಯಕಃ।
ದಾಮೋದರಃ ಕಾರ್ತಿಕಸ್ಯ ಚಾತುರ್ಮಾಸ್ಯೇ ತು ದೇವತಾಃ॥ ವರಾಹಪುರಾಣ

ಶ್ರೀಧರ, ಹೃಷೀಕೇಶ, ಪದ್ಮನಾಭ ಮತ್ತು ದಾಮೋದರ ಇವು ಕ್ರಮವಾಗಿ ನಾಲ್ಕು ಮಾಸಗಳಿಗೆ ಅಭಿಮಾನಿ ಭಗವದ್ರೂಪಗಳು.

2) **ಚಾತುರ್ಮಾಸ್ಯದಲ್ಲಿ ಈ ನಾಲ್ಕಕ್ಕೆ ದೋಷವಿಲ್ಲ.**

ಅತಸೀ ತುಲಸೀ ಚೈವ ಧಾತ್ರೀ ಚೂತಫಲಂ ತಥಾ।
ಗ್ರಾಹ್ಯಾಣ್ಯೇತಾನಿ ಚತ್ವಾರಿ ವಿಷ್ಣುನೋಕ್ತಂ ಯತಃ ಪುರಾ।
ನಾನ್ಯತ್ ಕಿಂಚಿತ್ ಸಮಶ್ನೀಯಾತ್ ಭುಕ್ತ್ವಾ ಚಾಂದ್ರಾಯಣಂ ಚರೇತ್॥
ಆದಿತ್ಯ ಪುರಾಣ

ಅಗಸಿ, ತುಲಸಿ, ನೆಲ್ಲಿ ಮತ್ತು ಮಾವು ಈ ನಾಲ್ಕನ್ನು ಹೊರತು ಪಡಿಸಿ ಬೇರೆ ಯಾವುದೇ ಶಾಕವೂ ಗ್ರಾಹ್ಯವಲ್ಲ. ಅಕಸ್ಮಾತ್ ತಿಂದದ್ದಾದರೆ ಚಾಂದ್ರಾಯಣ ವ್ರತ ಮಾಡಬೇಕು. (ಇವುಗಳಲ್ಲಿ ತುಲಸಿಯನ್ನು ಮಾತ್ರ ಸ್ವೀಕರಿಸಿ ಉಳಿದ ಮೂರನ್ನು ಬಿಡುವುದು ಶಿಷ್ಟ ಸಂಪ್ರದಾಯ)

3) **ಚಾತುರ್ಮಾಸ್ಯದಲ್ಲಿ ವೀಳ್ಯದೆಲೆಗೆ ನಿಷೇಧವಿಲ್ಲ**

ಪೂಗೀಫಲತಾಂಬೂಲ ಪತ್ರಾದೇರ್ನಿಷೇಧಾಭಾವಃ॥
(ಸ್ಮೃತ್ಯರ್ಥಸಾಗರ ಛಲಾರೀ ಆಚಾರ್ಯರು)

ಚಾತುರ್ಮಾಸ್ಯದಲ್ಲಿ ಅಡಿಕೆ, ವೀಳ್ಯದೆಲೆಯ ತಾಂಬೂಲ ಸ್ವೀಕರಿಸಬಹುದು, ವೀಳ್ಯದೆಲೆ ಸ್ವೀಕರಿಸಲು ನಿಷೇಧವಿಲ್ಲ.

4) **ಚಾತುರ್ಮಾಸ್ಯ ವ್ರತ ಸಮರ್ಪಣ**

ಇದಂ ವ್ರತಂ ಮಯಾದೇವ ಕೃತಂ ಪ್ರೀತ್ಯೈ ತವ ಪ್ರಭೋ।
ನ್ಯೂನಂ ಸಂಪೂರ್ಣತಾಂ ಯಾತು ತ್ವತ್ಪ್ರಸಾದಾಜ್ಜನಾರ್ದನ॥

ಪ್ರಭೋ! ನಿನ್ನ ಪ್ರೀತಿಗಾಗಿ ನನ್ನಿಂದ ಈ ವ್ರತವು ಮಾಡಲ್ಪಟ್ಟಿತು. ಜನಾರ್ದನನೇ! ನಿನ್ನ ಪ್ರಸಾದದಿಂದ ನ್ಯೂನತೆಗಳು ಸಂಪೂರ್ಣವಾಗಲಿ.

****

17

# ಸಂನ್ಯಾಸಿಗಳ ಚಾತುರ್ಮಾಸ್ಯ ಆಚರಣೆ

ಸಂನ್ಯಾಸಿಗಳು ಚಾತುರ್ಮಾಸ್ಯ ಕಾಲದಲ್ಲಿ ಒಂದೇ ಸ್ಥಳದಲ್ಲಿ ಇರುತ್ತ ಈ ವ್ರತವನ್ನು ಆಚರಿಸುತ್ತಾರೆ. ಇದಕ್ಕೆ ಕಾರಣ ಹೀಗಿದೆ. ಆಷಾಢಮಾಸದಿಂದ ಜಡಿಮಳೆ ಪ್ರಾರಂಭವಾಗುತ್ತದೆ. ಆ ಕಾಲದಲ್ಲಿ ಹುಳು, ಹುಪ್ಪಡಿಗಳು ಕ್ರಿಮಿ, ಕೀಟಗಳು ಹೆಚ್ಚು ಹೆಚ್ಚಾಗಿ ಉತ್ಪನ್ನವಾಗುತ್ತವೆ. ಅಹಿಂಸಾಪರರಾಗಿ ಇರುವ ಸಂನ್ಯಾಸಿಗಳು ಸಂಚಾರಪರರಾದರೆ ಪ್ರಾಣಿಹಿಂಸೆ ಅವರಿಂದ ಸಂಭವಿಸಬಹುದು. ಅಹಿಂಸಾಧರ್ಮದ ಅನುಷ್ಠಾನ ಪರರಾಗಿ ಒಂದೇ ಸ್ಥಳದಲ್ಲಿ ಇರುವುದು ವಾಡಿಕೆಯಾಗಿ ಬಂದಿದೆ.

ಅವರು ಚಾತುರ್ಮಾಸ್ಯಕ್ಕೆ ಕುಳಿತ ಸ್ಥಳದಲ್ಲಿ ಆ ಭಾಗದ ಜನರಿಗೆ ವಿಶೇಷ ಜ್ಞಾನಾದಿಗಳು ಲಭ್ಯವಾಗಿ ಅವರೂ ಸುಖಿಗಳಾಗಬೇಕೆಂಬ ಲೋಕಕಲ್ಯಾಣದ ಉದ್ದೇಶದಿಂದಲೂ ಅವರು ಒಂದೇ ಸ್ಥಳದಲ್ಲಿ ಇರುತ್ತಾರೆ.

ಈ ಕಾರಣದಿಂದ ಅವರು ಆಷಾಢ ಶುಕ್ಲ ದಶಮಿದಿನದಂದು ತಮ್ಮ ಆಚರಣೆಗೆ ಬೇಕಾಗುವ ಮಣ್ಣು, ಹಲ್ಲು ಉಜ್ಜುವ ಗಿಡಮೂಲಿಕೆ ಮೊದಲಾದವುಗಳನ್ನು ಸಂಗ್ರಹಿಸಿ ಇಟ್ಟುಕೊಂಡು ವ್ರತಸಂಕಲ್ಪಮಾಡಿ ಇರುತ್ತಾರೆ.

ಅವರು ಆ ದಿನ ಈ ರೀತಿ ಸಂಕಲ್ಪ ಮಾಡುತ್ತಾರೆ

ಅತಸ್ತೇಷಾಂ ಅಹಿಂಸಾರ್ಥಂ ಪಕ್ಷಾನ್ ವೈ ಯಾ ಶ್ರುತಿಸಂಶ್ರಯಾನ್।
ಸ್ಥಾಸ್ಯಾಮಶ್ಚತುರೋಮಾಸಾನ್ ಅತ್ರೈವಾಸತಿಬಾಧಕೇ॥

ಆಗ ಅಲ್ಲಿಯ ಜನರು ಅವರಿಗೆ ತಾವು ಇಲ್ಲಿಯೇ ವಾಸ್ತವ್ಯಮಾಡಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕೆಂದು ಪ್ರಾರ್ಥಿಸುವರು.

ಸಧ್ಯಕ್ಕೆ ಸಂನ್ಯಾಸಿಗಳು ಎರಡು ತಿಂಗಳು ಮಾತ್ರ ಚಾತುರ್ಮಾಸ್ಯಕ್ಕೆ ಕೂಡುವುದು ಕಂಡುಬರುತ್ತದೆ. "ಮಾಸೋ ವೈ ಪಕ್ಷಃ" ಎಂಬ ಪ್ರಮಾಣಾನುಸಾರವಾಗಿ ನಾಲ್ಕು ಪಕ್ಷಗಳೆಂದರೆ ಎರಡು ತಿಂಗಳಾಗುತ್ತವೆ. ಕಾರಣ ಆಷಾಢ ಕೃಷ್ಣಪಕ್ಷದಿಂದ ಭಾದ್ರಪದ ಪೌರ್ಣಿಮೆಯವರೆಗೆ ಸಂನ್ಯಾಸಿಗಳು ಈ ವ್ರತ ಕೈಕೊಳ್ಳುತ್ತಾರೆ.

****

# 18

# ಚಾತುರ್ಮಾಸ್ಯ ಆಚರಣೆ

## ಶ್ರೀ ವಾದಿರಾಜಪೂಜ್ಯಚರಣರ ನಿಲುವು

ಚಾತುರ್ಮಾಸ್ಯ ಕಾಲದಲ್ಲಿ ಅಂದರೆ ಆಷಾಢದಲ್ಲಿ ಶಾಕ, ಶ್ರಾವಣದಲ್ಲಿ ಧಧಿ, ಭಾದ್ರಪದದಲ್ಲಿ ಕ್ಷೀರ, ಆಶ್ವಿನಕಾರ್ತಿಕದಲ್ಲಿ ದ್ವಿದಳ, ಬಹುಬೀಜ ಪದಾರ್ಥಗಳನ್ನು ವರ್ಜಿಸಬೇಕು. ಈ ನಾಲ್ಕು ತಿಂಗಳಲ್ಲಿ ಆಯಾ ಪದಾರ್ಥಗಳನ್ನು ಏಕೆ ವರ್ಜಿಸಬೇಕು ಎಂಬುದನ್ನು ಶ್ರೀ ವಾದಿರಾಜಪೂಜ್ಯಚರಣರು ತಮ್ಮ ಪದ್ಯವೊಂದರಲ್ಲಿ ತಿಳಿಸಿಕೊಟ್ಟಿದ್ದಾರೆ.

ಆಷಾಢದಲ್ಲಿ ಶಾಕ ಹದ್ದಿನಮಾಂಸ
ಭೂಷಣ ಶ್ರಾವಣದಲಿ ದಧಿ ನಾಯಿಶ್ಲೇಷ್ಮ
ಭಾದ್ರಪದದಲಿ ಪಾಲು ಸುರಾಪಾನಸಮ
ಆಶ್ವಿನಕಾರ್ತಿಕಮಾಸದಲಿ ಚಿತ್ರ ಕ್ರಿಮಿರಾಶಿ ದ್ವಿದಳ ಬಹುಬೀಜ॥

ಆಷಾಢಮಾಸದಲ್ಲಿ ಶಾಕ(ತರಕಾರಿ) ಪದಾರ್ಥಗಳನ್ನು ತಿಂದರೆ ಹದ್ದಿನ ಮಾಂಸ ತಿಂದಂತೆ. ಶ್ರಾವಣದಲ್ಲಿ ಮೊಸರು ತಿಂದರೆ ನಾಯಿಯ ಕಾರಿಕೆ (ಕಫ) ತಿಂದಂತೆ. ಭಾದ್ರಪದದಲ್ಲಿ ಹಾಲು ಕುಡಿದರೆ ಸುರಾಪಾನ ಮಾಡಿದಂತೆ. ಆಶ್ವಿನ ಕಾರ್ತಿಕ ಮಾಸದಲಿ ದ್ವಿದಳ, ಬಹುಬೀಜ ಪದಾರ್ಥಗಳನ್ನು ತಿಂದರೆ ಕ್ರಿಮಿರಾಶಿಯನ್ನು ತಿಂದಂತೆ ಆಗುತ್ತದೆ.

ಮಾಸನಿಷದ್ಧ ವಸ್ತುವನು ಕುದಿಸಿಬೇಯಿಸಿದರೆ
ಅಸ್ತ್ರವನು ದೇವರ ಅಂಗದೊಳಿಟ್ಟಂತೆ।
ಮಾಸನಿಷಿದ್ಧ ವಸ್ತುವನು ದೇವರಿಗೆ ಸಮರ್ಪಿಸಿದರೆ
ಬಹುಕಲ್ಪ ನರಕದೊಳದ್ದುವಿರಿ ಪಿತೃಗಳ॥

ಆಯಾ ಮಾಸದಲ್ಲಿ ನಿಷಿದ್ಧ ವಸ್ತುಗಳನ್ನು ಕುದಿಸಿ ಬೇಯಿಸಿದರೆ ದೇವರ ಅಂಗದಲ್ಲಿ ಅಸ್ತ್ರವನ್ನು ಇಟ್ಟಂತೆ ಆಗುತ್ತದೆ. ಹಾಗೆಯೇ ಆಯಾ ಮಾಸದಲ್ಲಿ ನಿಷಿದ್ಧ ಪದಾರ್ಥಗಳನ್ನು ದೇವರಿಗೆ ಸಮರ್ಪಿಸಿದ್ದಾದರೆ ಅನೇಕ ಕಲ್ಪಗಳವರೆಗೆ ಪಿತೃಗಳನ್ನು ನರಕದಲ್ಲಿ ಬೀಳಿಸಿದ ಪಾಪ ಬರುತ್ತದೆ ಎಂಬುದಾಗಿ ತಿಳಿಯಬೇಕು.

ಇಂಥ ಚಾತುರ್ಮಾಸ್ಯ ವ್ರತವನ್ನು ಸರಿಯಾಗಿ ತಿಳಿದುಕೊಂಡು ಆಚರಿಸಿದ್ದಾದರೆ "ಬೇಕೆಂಬ ಮುಕ್ತಿಯನು ಕೊಡುವ ಹಯವದನ" ಎಂಬುದಾಗಿ ತಿಳಿಸಿ ಸಜ್ಜನರನ್ನು ಉದ್ಧರಿಸಿದ್ದಾರೆ.

****

# 19

# ಚಾತುರ್ಮಾಸ್ಯ ಕಾಲದಲ್ಲಿ ತಪ್ತಮುದ್ರಾಧಾರಣೆ

ಬ್ರಾಹ್ಮಣನಾದವನಿಗೆ ಯಜ್ಞೋಪವೀತಧಾರಣೆಯು ಎಷ್ಟು ಅವಶ್ಯವಾಗಿದೆಯೋ ಬೆಂಕಿಯಿಂದ ಕಾಯಿಸಿದ (ತಪ್ತ) ಮುದ್ರಾಧಾರಣೆಯು ಅಷ್ಟೇ ಅನಿವಾರ್ಯವಾಗಿದೆಯೆಂದು ಶ್ರೀ ವಾಯುಪುರಾಣವು ಹೇಳುತ್ತದೆ.[1]

ತಪ್ತ ಮುದ್ರಾಧಾರಣೆಯನ್ನು ಮಾಡಿಸಿಕೊಳ್ಳದವನು, ಯಜ್ಞೋಪವೀತ, ಶಿಖಾ, ಊರ್ಧ್ವಪುಂಡ್ರ ನಾಮಗಳನ್ನು ಧರಿಸಿದರೂ ಯಾವ ಪ್ರಯೋಜನವಿಲ್ಲ.[2]

ಇಂತಹ ತಪ್ತಮುದ್ರಾಧಾರಣೆಯನ್ನು ಪರಮಹಂಸರೆನಿಸಿಕೊಂಡ, ಪರಿವ್ರಾಜಕ ಸಂನ್ಯಾಸಿ ಪೀಠಾಧಿಪತಿಗಳಿಂದಲೇ ಮಾಡಿಸಿಕೊಳ್ಳಬೇಕು.[3]

ತಪ್ತಮುದ್ರಾಂಕನ ಮಾಡಿಸಿಕೊಳ್ಳದವನ ನಿತ್ಯನೈಮಿತ್ತಿಕ, ಶ್ರುತ್ಯುಕ್ತಕರ್ಮಗಳು ವ್ಯರ್ಥವೆನಿಸುತ್ತವೆ ಎಂದು ವಸಿಷ್ಠಸ್ಮೃತಿಕಾರರು ಹೇಳುತ್ತಾರೆ.[4]

ಹಾಗಾಗಿ ಪುರುಷರು, ವಿವಾಹಿತಸ್ತ್ರೀಯರು, ಬಾಲಕರು, ಬ್ರಹ್ಮಚಾರಿಗಳು ಆಷಾಢ ಶುದ್ಧ ಏಕಾದಶಿಯಂದು, ಭಾದ್ರಪದ ಶುದ್ಧ ಏಕಾದಶಿಯಂದು, ಕಾರ್ತಿಕ ಶುದ್ಧ ಏಕಾದಶಿಯಂದು ತಮ್ಮ ತಮ್ಮ ಪೀಠಾಧಿಪತಿಗಳಿಂದ ತಪ್ತಮುದ್ರಾಧಾರಣೆ ಮಾಡಿಸಿಕೊಳ್ಳಬೇಕು. ಇದು ಉತ್ತಮ ಪಕ್ಷವಾಗಿದೆ

ಮೂರೂ ಏಕಾದಶಿಗಳಲ್ಲಿ ಸಾಧ್ಯವಾಗದಿದ್ದರೆ ಆದಿ, ಅಂತ್ಯಗಳಲ್ಲಿ ತಪ್ತಮುದ್ರಾಧಾರಣೆ ಮಾಡಿಸಿಕೊಳ್ಳುವದು ಕನಿಷ್ಠಪಕ್ಷವಾಗಿದೆ.

****

---

1) ಉಪವೀತಕವದ್ಧಾರ್ಯಾ ಶಂಖಚಕ್ರಾದಯಸ್ತಥಾ॥ ಶ್ರೀ ವಾಯುಪುರಾಣ

2) ಉಪವೀತಂ ಶಿಖಾಂ ಚೈವ ಊರ್ಧ್ವಪುಂಡ್ರಂ ತಥೈವ ಚ।
ಚಕ್ರಲಾಂಛನಹೀನಸ್ಯ ವಿಪ್ರಸ್ಯ ವಿಫಲಂ ಭವೇತ್ ॥ ಪುರಾಣ ವಚನ

3) ಪ್ರತಪ್ತಂ ವಿಧಿನಾ ವಹ್ನೌ ಸಹಸ್ರಾರಂ ಸುವರ್ಣಕಮ್।
ಪ್ರಣತಾಯ ಸ್ವಶಿಷ್ಯಾಯ ಹಂಸೋ ಗುರುರಥಾಂಕಯೇತ್॥
ಮಾರ್ಕಂಡೇಯಪುರಾಣ

4) ಪ್ರತಪ್ತಂ ಬಿಭೃಯಾಚ್ಚಕ್ರಂ ಶಂಖಂ ಚ ಭುಜಮೂಲಯೋಃ।
ಶ್ರೌತಸ್ಮಾರ್ತಾದಿ ಸಿದ್ಧ್ಯರ್ಥಂ ಚಕ್ರಂ ವಿಧಿವಿಧಾನತಃ॥ ವಸಿಷ್ಠ ಸ್ಮೃತಿ-

# ಚಾತುರ್ಮಾಸ್ಯಕಾಲದಲ್ಲಿ ಪುಣ್ಯತಮದಿನಗಳು–ಆಚರಣೆ

ಮನ್ವಾದಿಯಾದ ಆಷಾಢಮಾಸದ ಪೌರ್ಣಿಮೆಯದಿನ ಪಿತೃಗಳನ್ನು ಉದ್ದೇಶಿಸಿ ತರ್ಪಣ ಕೊಡಬೇಕು. ಮುಮುಕ್ಷುಗಳು ಅಂದು ವಾಮನದೇವರ ಪೂಜೆಯನ್ನು ಭಕ್ತಿಯಿಂದ ಮಾಡಿ ಬ್ರಾಹ್ಮಣಭೋಜನ ಮಾಡಿಸಿ ಯಥಾ ಶಕ್ತಿ ಬಹುದಕ್ಷಿಣೆ ಕೊಡಬೇಕು.[1]

ಎರಡು ಪಕ್ಷಗಳಲ್ಲಿ ಎರಡು ಏಕಾದಶೀ, ಅಮಾವಾಸ್ಯಾ, ಪೌರ್ಣಿಮಾ ಮತ್ತು ಶ್ರವಣ ನಕ್ಷತ್ರದ ದಿನ ಬರುವ ಐದು ತಿಥಿಗಳನ್ನು "ವಿಷ್ಣುಪಂಚಕ"ವೆಂದು ಕರೆಯುತ್ತಾರೆ. ವ್ರತಿಯಾದವನು ಈ ತಿಥಿಗಳಲ್ಲಿ ಉಪವಾಸ ಇರಬೇಕು. ಅಂದು ವಾಮನದೇವರನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ದಕ್ಷಿಣೆಕೊಡಬೇಕು.[2]

ಶ್ರಾವಣಶುದ್ಧ ಪಂಚಮಿಯ ದಿನ ನಾಗಗಳ ಪೂಜೆಯನ್ನು ಮಾಡಬೇಕು. ಭಗವಂತನ ಪೂಜೆಯ ನಂತರ ಭಗವಂತನಿಗೆ ನಿವೇದಿತ ಶರ್ಕರಾದಿ ಪದಾರ್ಥಗಳನ್ನು ನಿವೇದಿಸಿ ಶೇಷ, ವಾಸುಕಿ ಮತ್ತು ತಕ್ಷಕಾದಿಗಳನ್ನು ಪೂಜಿಸಬೇಕು. ಸಾಕ್ಷಾತ್ ಸಂಕರ್ಷಣರೂಪೀ ಭಗವಂತನು, ಶೇಷಾದಿಗಳಿಗೆ ಸಲ್ಲಿಸಿದ ಪೂಜೆಯನ್ನು ಆ ದೇವತೆಗಳ ಅಂತರ್ಯಾಮಿಯಾಗಿದ್ದು ಅವನೇ ಸ್ವೀಕರಿಸುತ್ತಾನೆ. ಬ್ರಾಹ್ಮಣರಿಗೆ ಅಂದು ಭೋಜನ ಮಾಡಿಸಿ ಅವರಿಗೆ ಯಥಾಶಕ್ತಿ ದಕ್ಷಿಣೆಕೊಡಬೇಕು.[3]

---

1) ಶ್ರೀವರಾಹ ಉವಾಚ
ಆಷಾಢೇ ಪೌರ್ಣಮಾಸ್ಯಾಂ ತು ಮನ್ವಾದೌ ತರ್ಪಯೇತ್ ಪಿತೄನ್।
ವಾಮನಸ್ಯ ತು ಪೂಜಾ ವೈ ಸಮ್ಯಕ್ಕಾರ್ಯಾ ಮುಮುಕ್ಷುಭಿಃ॥
ಬ್ರಾಹ್ಮಣಾನ್ ಭೋಜಯೇತ್ ಶಕ್ತ್ಯಾ ದದ್ಯಾಚ್ಚ ಬಹುದಕ್ಷಿಣಾಮ್ ॥
ಶ್ರೀ ವರಾಹಪುರಾಣ ಚಾತುರ್ಮಾಸ್ಯ ಮಹಾತ್ಮೆ (19–2)

2) ಏಕಾದಶ್ಯಾವಮಾ ಪೂರ್ಣಾ ಶ್ರವಣಂ ಚೇತಿ ಪಂಚಕಮ್।
ವಿಷ್ಣುಪಂಚಕಮಿತ್ಯುಕ್ತಂ ವ್ರತೀ ತತ್ರೋಪವಾಸಯೇತ್।
ಬ್ರಾಹ್ಮಣಾನ್ ಭೋಜಯೇದೇವಂ ವಾಮನಂ ಚಾಪಿ ಪೂಜಯೇತ್॥
ಚಾತುರ್ಮಾಸ್ಯ ಮಹಾತ್ಮೆ (19–8)

3) ತತಃ ಕುರ್ವೀತ ಪಂಚಮ್ಯಾಂ ನಾಗಾನಾಂ ಪೂಜನಂ ನರಃ।
ಮತ್ಪೂಜಾನಂತರಂ ಶೇಷಂ ವಾಸುಕಿಂ ತಕ್ಷಕಾದಿಕಾನ್।
ಪೂಜಯೇತ್ ಶರ್ಕರಾಕ್ಷೀರ ಘೃತ ಪಾಯಸ ಮೋದಕೈಃ।
ಸಾಕ್ಷಾತ್ ಸಂಕರ್ಷಣಾತ್ಮಾಹಂ ತಾಂ ಪೂಜಾಂ ಸ್ವಯಮಾದದೇ
ಬ್ರಾಹ್ಮಣಾನ್ ಭೋಜಯೇತ್ ಪಶ್ಚಾತ್ ದದ್ಯಾತ್ ಶಕ್ತ್ಯಾಚ ದಕ್ಷಿಣಾಮ್॥
ಚಾತುರ್ಮಾಸ್ಯ ಮಹಾತ್ಮೆ (19–15)

ಶ್ರಾವಣ ಶುಕ್ಲಪಕ್ಷದ ದ್ವಾದಶಿಗೆ "ಪವಿತ್ರದ್ವಾದಶೀ" ಎಂದು ಹೆಸರು. ಏಕಾದಶೀ ದಿನದಂದು ಈ ಪವಿತ್ರವನ್ನು ದೇವರಿಗೆ ಸಮರ್ಪಿಸಿ, ದ್ವಾದಶೀ ದಿನ ಶ್ರೀಹರಿಯನ್ನು ಪೂಜಿಸಿ ಪ್ರಾರ್ಥಿಸಿ ಧರಿಸಬೇಕು. ಈ ಪವಿತ್ರಾರೋಪಣ ಮಾಡದಿದ್ದರೆ ವರ್ಷಪೂರ್ತಿ ಮಾಡಿದ ಪೂಜೆ ವ್ಯರ್ಥವಾಗುತ್ತದೆ.[4]

ಅತಿ ಪುಣ್ಯಪ್ರದವಾದ ಜನ್ಮಾಷ್ಟಮಿಯು ಭಗವಂತನಿಗೆ ಪ್ರಿಯವಾಗಿದೆ. ಆ ದಿನ ರಾತ್ರಿ ಶ್ರೀಕೃಷ್ಣನ ಪೂಜೆ ಮಾಡಬೇಕು. (ಪಂಚಾಂಗದಲ್ಲಿ ಕೊಟ್ಟ ಪ್ರಕಾರ ಉಪವಾಸ, ಪಾರಣೆಗಳನ್ನು ಮಾಡಬೇಕು) ಮರುದಿನ ಪಾರಣೆಯಂದು ಬ್ರಾಹ್ಮಣ ಭೋಜನ ಮಾಡಿಸಿ, ತಾಂಬೂಲ ದಕ್ಷಿಣೆ ಕೊಟ್ಟು ನಮಸ್ಕರಿಸಬೇಕು.[5]

ಭಾದ್ರಪದ ಶುಕ್ಲ ಚತುರ್ಥಿಯ ದಿನ ಮೋದಕ, ಘೃತ, ಪಾಯಸಾದಿಗಳಿಂದ ಕೂಡಿದ ಖಾದ್ಯ ಭಕ್ಷ್ಯಗಳನ್ನು ಸಮರ್ಪಿಸಿ ಗಣೇಶನ ಪೂಜೆ ಮಾಡಬೇಕು. ಗಣಪತಿಗೆ ಮಾಡಿದ ಪೂಜೆಯು ಅವನ ಅಂತರ್ಯಾಮಿ ವಿಶ್ವಂಭರನಾಮಕ ಭಗವಂತನ ಪೂಜೆಯೇ ಆಗುತ್ತದೆ. ಬ್ರಾಹ್ಮಣರಿಂದ ಕೂಡಿಕೊಂಡು ಉತ್ತಮವಾದ ನೈವೇದ್ಯ ಭಕ್ಷ್ಯಗಳನ್ನು ಸೇವಿಸಬೇಕು.[6]

ಅನಂತಚತುರ್ದಶಿಯಂದು ಅನಂತನದಾರವನ್ನು ಭಕ್ತಿಯಿಂದ ಪೂಜಿಸಬೇಕು. ಉತ್ತಮವಾದ ಅನಂತವ್ರತ ಧಾರಣಮಾಡಿ 14 ವರ್ಷಗಳವರೆಗೆ ಅನಂತನದಾರವನ್ನು ಪೂಜಿಸಿ ಅನಂತನನ್ನು ಆರಾಧಿಸಬೇಕು. ಬ್ರಾಹ್ಮಣರಿಗೆ ದಕ್ಷಿಣೆಯೊಂದಿಗೆ ಅಪೂಪ ದಾನಕೊಡಬೇಕು. ಭಗವಂತನೇ ಅನಂತನಾಮಕನಾಗಿ ಕಾಲ ಹಾಗೂ ಶೇಷರೂಪಿಯಾಗಿದ್ದು, ಭಕ್ತರು ಮಾಡುವ ಪೂಜೆ ಸ್ವೀಕರಿಸಿ ಅವರಿಗೆ ಅಕ್ಷಯ ಫಲವನ್ನು ನೀಡುತ್ತಾನೆ.[7]

---

4) ನ ಕರೋತಿ ವಿಧಾನೇನ ಪವಿತ್ರಾರೋಪಣಂ ತು ಯಃ।
ತಸ್ಯ ಸಾಂವತ್ಸರೀ ಪೂಜಾ ನಿಷ್ಫಲಾ ಮುನಿಸತ್ತಮ ॥ ವಿಷ್ಣುರಹಸ್ಯ

5) ತತೋ ಜನ್ಮಾಷ್ಟಮೀ ಪುಣ್ಯಾ ಮಮಾತೀವ ಪ್ರಿಯಾ ಹಿ ಸಾ।
ತಸ್ಯಾಂ ನಿಸೀಥೇ ಕರ್ತವ್ಯಂ ಕೃಷ್ಣಮೂರ್ತೇಃ ಪ್ರಪೂಜನಮ್ ॥ ಚಾತುರ್ಮಾಸ್ಯ ಮಹಾತ್ಮೆ(19–21)

6) ತತಃ ಶುಕ್ಲ ಚತುರ್ಥ್ಯಾಂ ತು ಪೂಜಯೇದ್ ಗಣನಾಯಕಮ್।
ಮೋದಕೈಃ ಖಾದ್ಯ ಭಕ್ಷೈಶ್ಚ ಘೃತಪಾಯಸಮಿಶ್ರಿತೈಃ॥
ಬ್ರಾಹ್ಮಣೈಃ ಸಹ ಭುಂಜೀತ ಮಮ ನೈವೇದ್ಯಮುತ್ತಮಮ್।
ಮಮೈವ ಸಾ ಭವೇತ್ ಪೂಜಾ ವಿಶ್ವರೂಪಸ್ಯ ಜಾಗ್ರತಃ॥ ಚಾತುರ್ಮಾಸ್ಯ ಮಹಾತ್ಮೆ (19–38)

7) ತತೋಽನಂತಚತುರ್ದಶ್ಯಾಂ ರಕ್ತಂ ಸೂತ್ರಂ ಪ್ರಪೂಜಯೇತ್।
ಚತುರ್ದಶೈವ ವರ್ಷಾಣಿ ಗೃಹೀತ್ವಾ ವ್ರತಮುತ್ತಮಮ್॥
ಬ್ರಾಹ್ಮಣೇಭ್ಯಃ ಪ್ರದಾತವ್ಯಾ ಅಪೂಪಾಃ ಸಹದಕ್ಷಿಣಾಃ।
ಭವೇತ್ತದಕ್ಷಯಂ ಪುಣ್ಯಂ ಪರಂಪ್ರೀತಿಕರಂ ಮಮ ॥ ಚಾತುರ್ಮಾಸ್ಯ ಮಹಾತ್ಮೆ (19–53)

ಅನಂತರ ಪೌರ್ಣಿಮೆಯಂದು ನಾಂದೀಮುಖಿ ಪಿತೃಗಳನ್ನುದ್ದೇಶಿಸಿ ಶ್ರಾದ್ಧವನ್ನು ಮಾಡಬೇಕು. ಈ ರೀತಿ ಶ್ರಾದ್ಧವನ್ನು ಮಾಡುವವನ ವಂಶವು ಅವಿಚ್ಛಿನ್ನವಾಗಿ ಬೆಳೆಯುತ್ತದೆ. [8]

ಭಾದ್ರಪದ ಕೃಷ್ಣ ಷಷ್ಠೀ ತಿಥಿಯು ಮಂಗಳವಾರವಿದ್ದು ಅಂದಿನ ದಿನ ರೋಹಿಣೀ ನಕ್ಷತ್ರವಿದ್ದರೆ ವ್ಯತೀಪಾತ ಯುಕ್ತವಾದ ಆ ದಿನಕ್ಕೆ "ಕಪಿಲಾಷಷ್ಠೀ" ಎಂದು ಕರೆಯುತ್ತಾರೆ. ಇದು ಅತ್ಯಂತ ಪುಣ್ಯಪ್ರದವಾಗಿದ್ದು ಇಂಥ ಯೋಗವು ಅಲ್ಪ ಜೀವಿಗಳಾದ ಮನುಷ್ಯರಿಗೆ ಬಹುಕ್ವಚಿತ್ತಾಗಿ ಲಭ್ಯವಾಗುತ್ತದೆ. ಈ ದಿನ ಮಾಡಿದ ದಾನವು ಅಕ್ಷಯಪುಣ್ಯಪ್ರದವಾಗುತ್ತದೆ.[9]

ತ್ರಯೋದಶೀ ದಿನ ಅಶೇಷ ಪಿತೃಗಳಿಗೆ ತರ್ಪಣಕೊಡಬೇಕು. ಅಂದು ಪಿಂಡಪ್ರದಾನ ಮಾಡುವುದರಿಂದ ಸಕಲ ಪಿತೃಗಳು ಸಂತುಷ್ಟರಾಗುವರು. ಎಲ್ಲ ಶ್ರಾದ್ಧದಿನಗಳಲ್ಲಿ ತ್ರಯೋದಶಿಯು ಶ್ರೇಷ್ಠವಾಗಿದೆ, ಆದ್ದರಿಂದ ಆ ದಿನ ಮಾಡಿದ ಶ್ರಾದ್ಧವು ಪಿತೃಗಳಿಗೆ ತೃಪ್ತಿಪ್ರದವಾಗಿ ಅಕ್ಷಯ ಫಲಕೊಡುತ್ತದೆ.[10]

ಅಮಾವಾಸ್ಯೆಯು ಪಿತೃಗಳಿಗೆ ತೃಪ್ತಿಕಾರಿಯಾಗಿದೆ ಅಂದಿನ ದಿನ ಮಾಡಿದ ಶ್ರಾದ್ಧವು ಪಿತೃಗಳಿಗೆ ತೃಪ್ತಿಪ್ರದವಾಗಿ ಅಕ್ಷಯ ಫಲಕೊಡುತ್ತದೆ. ವರ್ಷದ ಎಲ್ಲ ಅಮಾವಾಸ್ಯಗಳಲ್ಲಿ ಭಾದ್ರಪದ ಅಮಾವಾಸ್ಯೆಯು ಶ್ರೇಷ್ಠವೂ ಪುಣ್ಯತಮವೂ ಆಗಿದೆ. ಅದರಲ್ಲೂ ಆ ದಿನ ರವಿವಾರ ಅಥವಾ ಸೋಮವಾರ ಬಂದರೆ ಅದು ವಿಶೇಷವಾಗಿ ಪುಣ್ಯಪ್ರದವಾಗುತ್ತದೆ. [11]

---

8) ಪೌರ್ಣಮಾಸ್ಯಾಂ ತಥಾ ಕುರ್ಯಾತ್ ಶ್ರಾದ್ಧಂ ನಾಂದಿಮುಖಾನ್ ಪಿತ್ರೂನ್।
ಅಚ್ಛಿನ್ನೋಽಪಿ ಭವೇತ್ತಸ್ಯ ವಂಶಸ್ತಚ್ಛ್ರಾದ್ಧಕಾರಿಣಃ॥ ಚಾತುರ್ಮಾಸ್ಯ ಮಹಾತ್ಮೆ (19–57)

9) ತತ್ರ ಷಷ್ಠೀ ಭವೇದ್ ಯಾ ತು ರೋಹಿಣೀ ಭೌಮಸಂಯುತಾ।
ವ್ಯತೀಪಾತಯುತಾ ಸಾ ಸ್ಯಾತ್ ಕಪಿಲಾ ಪುಣ್ಯವರ್ಧಿನೀ॥
ಕದಾಚಿಲ್ಲಭತೇ ಸಾ ತು ಮನುಷ್ಯೈರಲ್ಪಜೀವಿಭಿಃ॥ ಚಾತುರ್ಮಾಸ್ಯ ಮಹಾತ್ಮೆ (19–60)

10) ತ್ರಯೋದಶ್ಯಾಂ ತತಃ ಕುರ್ಯಾತ್ ಅಶೇಷ ಪಿತೃತರ್ಪಣಮ್।
ಪಿಂಡದಾನೇನ ಜಾಯಂತೇ ಪಿತರಃ ಪ್ರೀತಮಾನಸಾಃ॥
ಶ್ರಾದ್ಧಾಹೇಷು ಚ ಸರ್ವೇಷು ವರಿಷ್ಠಾ ಸಾ ತ್ರಯೋದಶೀ।
ಅತಸ್ತಸ್ಯಾಂ ಕೃತಶ್ರಾದ್ಧಮಕ್ಷಯ್ಯಂ ಪಿತೃತೃಪ್ತಿದಮ್॥ ಚಾತುರ್ಮಾಸ್ಯ ಮಹಾತ್ಮೆ (19–68)

11) ಅಮಾವಾಸ್ಯಾ ತಥಾ ತತ್ರ ಪಿತ್ರೂಣಾಂ ತೃಪ್ತಿಕಾರಿಣೀ।
ತಸ್ಯಾಮಪಿ ಕೃತಶ್ರಾದ್ಧಮಕ್ಷಯ್ಯಂ ಪಿತೃತೃಪ್ತಿಕಮ್॥
ಅಮಾವಾಸ್ಯಾಸು ಸರ್ವಾಸು ಶ್ರೇಷ್ಠಾ ಪುಣ್ಯತಮಾ ಸ್ಮೃತಾ।
ರವೀಂದುಗುಣಯುಕ್ತಾ ಚ ವಿಶೇಷಾತ್ ಪುಣ್ಯದಾ ಸ್ಮೃತಾ॥
ಚಾತುರ್ಮಾಸ್ಯ ಮಹಾತ್ಮೆ (19–71)

ಆಶ್ವಿನ ಶುದ್ಧ ಪ್ರತಿಪದೆಯಿಂದ ನವಮಿವರೆಗಿನ ಒಂಭತ್ತು ದಿನಗಳು ಪುಣ್ಯದಿನಗಳಾಗಿವೆ. ಈ ದಿನಗಳಲ್ಲಿ ಯಾವುದಾದರೂ ದೇವತಾಮಂತ್ರ ಜಪಿಸಿದರೆ ಅದು ಶೀಘ್ರದಲ್ಲಿ ಫಲಕಾರಿಯಾಗುತ್ತದೆ. [12]

ಭಕ್ತಿಯುತನಾದ ನರನು ನವಮೀದಿನ ಮಹಾದಾನಗಳನ್ನು ಮಾಡಬೇಕು. ಈ ದಾನಗಳಿಗೆ ಕೋಟಿಗುಣ ಪುಣ್ಯವಿದೆ. ಅದರಂತೆ ದಶಮೀದಿನವೂ ಮಾಡಬೇಕು.[13]

ದಶಮಿಯು ವಿಜಯಾದಶಮೀ ಎಂದು ಪ್ರಸಿದ್ಧವಾಗಿದ್ದು ಪುಣ್ಯಪ್ರದವಾದ ಅದು ಮನುಷ್ಯರಿಗೆ ಜಯಪ್ರದವಾಗಿದೆ. ಮಹಾಪುಣ್ಯಪ್ರದವಾಗಿದೆ. ಸರ್ವದಾ ಮಂಗಲವನ್ನಿಚ್ಛಿಸುವವರು ಆದಿನ ಮಂಗಲ ಕಾರ್ಯಗಳನ್ನು ಮಾಡಬೇಕು.[14]

ಆಶ್ವಿನ ಕೃಷ್ಣಪಕ್ಷದ ಚತುರ್ದಶಿಯ ದಿನ ಚಂದ್ರೋದಯವಾದನಂತರ ನರಕಭೀರುಗಳಾದ ಜನರು ತಿಲತೈಲವನ್ನು ಹಚ್ಚಿಕೊಂಡು ಸ್ನಾನಮಾಡಬೇಕು. ಆ ಸಮಯಕ್ಕೆ ತೈಲದಲ್ಲಿ ರಮಾದೇವಿಯರ ವಿಶೇಷ ಸನ್ನಿಧಾನವಿರುವುದು. ಅನಂತರ ಶ್ರೀ ಶ್ರೀಹರಿಗೆ ವಿಧಿಪೂರ್ವಕವಾಗಿ ಮಹಾಮಂಗಳಾರತಿಯನ್ನು ಮಾಡಬೇಕು.[15]

---

12) ಇಷ ಶುಕ್ಲ ಪ್ರತಿಪದಮಾರಭ್ಯ ನವಮೀದಿನಮ್।
ಯಾವತ್ತಾವನ್ಮಹಾಪುಣ್ಯಂ ದಿನಾನಾಂ ನವಕಂ ಸ್ಮೃತಮ್॥
ಚಾತುರ್ಮಾಸ್ಯ ಮಹಾತ್ಮೆ (19–74)

13) ಮಹಾದಾನಾನಿ ಕುರ್ವೀತ ನವಮ್ಯಾಂ ಭಕ್ತಿಮಾನ್ನರಃ।
ತೇಷಾಂ ಕೋಟಿಗುಣಂ ಪುಣ್ಯಂ ತಥೈವ ದಶಮೀ ದಿನೇ॥
ಚಾತುರ್ಮಾಸ್ಯ ಮಹಾತ್ಮೆ (19–78)

14) ವಿಜಯಾದಶಮೀ ಪ್ರೋಕ್ತಾ ಸಾ ಪುಣ್ಯಾ ಜಯದಾ ನೃಣಾಮ್।
ವಿಜಯಃ ಸ್ಯಾತ್ತತಃ ಸಾತು ಮಹಾಪುಣ್ಯಫಲಪ್ರದಾ॥
ಕುರ್ವೀತ ಮಂಗಲಾನ್ಯಸ್ಯಾಂ ಸರ್ವದಾ ಮಂಗಲೇಪ್ಸುನಾ॥
ಚಾತುರ್ಮಾಸ್ಯ ಮಹಾತ್ಮೆ (19–80)

15) ಆಶ್ವಿನಸ್ಯಾಸಿತೇ ಪಕ್ಷೇ ಚತುರ್ದಶ್ಯಾಂ ವಿಧೂದಯೇ।
ಸ್ನಾತವ್ಯಂ ತಿಲತೈಲೇನ ನರೈರ್ನರಕಭೀರುಭಿಃ॥
ತದಾನೀಂ ತು ರಮಾದೇವಿ ತತ್ರ ತಿಷ್ಠತಿ ಸರ್ವದಾ॥
ಚಾತುರ್ಮಾಸ್ಯ ಮಹಾತ್ಮೆ (19–82)

ಆ ದಿನ ನರಕನೆಂಬ ಅಸುರನು (ದೈತ್ಯನು) ಹತನಾದುದರಿಂದ ಮಹಾಪುಣ್ಯ ಪ್ರದವಾದ ಆ ಚತುರ್ದಶಿಯು "ನರಕ ಚತುರ್ದಶೀ" ಎಂಬುದಾಗಿ ಲೋಕದಲ್ಲಿ ಪ್ರಸಿದ್ಧವಾಗಿದೆ.[16]

ಚತುರ್ದಶಿಯ ದಿನ ಯಾವನು ತೈಲಸ್ನಾನವನ್ನು ಮಾಡುವದಿಲ್ಲವೋ, ಆ ಮೂರ್ಖನು ಏಳು ಜನ್ಮಗಳಲ್ಲಿ ದರಿದ್ರನಾಗುವನು ಮತ್ತು ಸ್ತ್ರೀಯಾದವಳು ವೈಧವ್ಯವನ್ನು ಹೊಂದುವಳು. ಆ ದಿನ ಯಾವನು ಬ್ರಾಹ್ಮಣರಿಗೆ ತೈಲಹಚ್ಚಿ ಉಷ್ಣೋದಕದಿಂದ ಸ್ನಾನಮಾಡಿಸುವನೋ ಅಂಥವನ ಮನೆಯಲ್ಲಿ ಶ್ರೀ ಲಕ್ಷ್ಮೀದೇವಿಯು ಜನ್ಮಾಂತರಗಳಲ್ಲಿ ಸ್ಥಿರವಾಗಿ ಉಳಿಯುವಳು.[17]

ಕಾರ್ತಿಕ ಶುದ್ಧ ಪ್ರತಿಪದೆಯ ದಿನ (ಬಲಿ ಪ್ರತಿಪದೆ) ಪ್ರಾತಃಕಾಲದಲ್ಲಿ ತಿಲಸ್ನಾನ ಮಾಡಬೇಕು ಆ ದಿನ ಹಿಂದಕ್ಕೆ ಬಲಿಚಕ್ರವರ್ತಿಯು ಭಗವಂತನ ಕೃಪೆಯಿಂದ ಸ್ವರ್ಗಾಧಿಪತ್ಯವನ್ನು ಪಡೆದಿದ್ದನು, ಪ್ರತಿಪದೆಯ ದಿನ ನರನು ಹರ್ಷ, ರೋಷ, ದುಃಖ ಇವುಗಳಲ್ಲಿ ಯಾವುದನ್ನು ಹೊಂದಿರುವನೋ ಇಡೀ ವರ್ಷ ಪ್ರಾಯಃ ಅದನ್ನೇ ಹೊಂದಿ ಸಂವತ್ಸರ ಕಳೆಯುವನು ಎಂಬುದಾಗಿ ಬಲಿಚಕ್ರವರ್ತಿಗೆ ಭಗವಂತನು ವರ ಕೊಟ್ಟಿರುವನು. ಆದ್ದರಿಂದ ಆ ದಿನ ವಿಶೇಷವಾಗಿ ಮಂಗಲೋತ್ಸವ ಆಚರಿಸಿ ಹರ್ಷದಿಂದ ಇರಬೇಕು. ಆ ದಿನ ಬ್ರಾಹ್ಮಣರಿಗೆ ಕೊಡುವ ದಾನವು ಮಹಾಪುಣ್ಯಪ್ರದವಾಗಿರುವದು.[18]

---

16) ನರಕಶ್ಚ ಹತೋ ದೈತ್ಯಃ ತಿಥೌ ತಸ್ಯಾಂ ಯತೋ ಹಿ ಸಾ।
ಖ್ಯಾತಾ ಲೋಕೇ ಮಹಾಪುಣ್ಯಾ ನರಕಾಖ್ಯಾ ಚತುರ್ದಶೀ॥
ಚಾತುರ್ಮಾಸ್ಯ ಮಹಾತ್ಮೆ (19–85)

17) ಯಸ್ತು ನ ಕುರುತೇ ತಸ್ಯಾಂ ತೈಲಸ್ನಾನಂ ವಿಮೂಢಧೀಃ।
ಸಪ್ತಜನ್ಮ ದರಿದ್ರಃ ಸ್ಯಾತ್ ನಾರೀ ಚ ವಿಧವಾ ಭವೇತ್॥
ತಸ್ಯಾಂ ಯಃ ಸ್ನಾಪಯೇದ್ವಿಪ್ರಾನ್ ತೈಲೇನೋಷ್ಣೇನ ವಾರಿಣಾ।
ತಸ್ಯ ಗೇಹೇ ಸದಾ ಲಕ್ಷ್ಮೀಃ ಭವೇಜ್ಜನ್ಮನಿ ಜನ್ಮನಿ॥
ಚಾತುರ್ಮಾಸ್ಯ ಮಹಾತ್ಮೆ (19–87,88)

18) ಪ್ರತಿಪದ್ಯಪಿ ತೈಲೇನ ಪ್ರಾತಃ ಸ್ನಾಯಾದ್ಬಲೇರ್ದಿನೇ।
ಪೂರ್ವಂ ಬಲಿಃ ಸ್ವರ್ಗರಾಜ್ಯಂ ಪ್ರಾಪ್ತವಾನ್ ಕೃಪಯಾ ಮಮ ॥
ವರಂ ಚ ದತ್ತವಾನಸ್ಮೈ ಯೋ ನರಃ ಪ್ರತಿಪದ್ದಿನೇ।
ಹರ್ಷೇಣಾಪ್ಯಥರೋಷೇಣ ದುಃಖೇನಾಥ ಸುಖೇನ ವಾ॥
ಯುಕ್ತೋಽವತಿಷ್ಠತೇ ತದ್ವತ್ ಪ್ರಾಯೋ ವರ್ಷಂ ಕ್ರಮೇದಸೌ।
ಅತಸ್ತತ್ರ ಪ್ರಕುರ್ವೀತ ವಿಶೇಷಾನ್ಮಂಗಲೋದಯಮ್॥
ಬ್ರಾಹ್ಮಣೇಭ್ಯಸ್ತಥಾ ದಾನಂ ಮಹಾಪುಣ್ಯಾ ಫಲಪ್ರದಮ್॥
ಚಾತುರ್ಮಾಸ್ಯ ಮಹಾತ್ಮೆ (19–90–93)

ಕಾರ್ತಿಕಮಾಸದ ಶುದ್ಧ ದ್ವಾದಶಿಯದಿನ ಪ್ರಾತಃಕಾಲದಲ್ಲಿ ಪರಮೋತ್ಸವವನ್ನು ಮಾಡಿ ಸಾಯಂಕಾಲ ತುಳಸೀ ಸನ್ನಿಧಾನದಲ್ಲಿ ಪತಾಕ, ಧ್ವಜಗಳನ್ನು ಏರಿಸಿ ದಾಮೋದರನ ಪೂಜೆಯನ್ನು ವೈಭವದಿಂದ ಮಾಡಬೇಕು. ರತ್ನಖಚಿತವಾದ ರಮ್ಯವಾದ ಸಿಂಹಾಸನದಲ್ಲಿ ಮಂಡಿತನಾದ ಶ್ರೀದಾಮೋದರನನ್ನು ಪಂಚರಾತ್ರೋಕ್ತ ವಿಧಿಯಂತೆ ಪರಮಭಕ್ತಿಯಿಂದ ಪೂಜಿಸಬೇಕು.[19]

ದಾಮೋದರನ ಪೂಜಾ ನಂತರ ತುಳಸೀ, ಧಾತ್ರಿಗಳನ್ನು ಪೂಜಿಸಬೇಕು. ಧಾತ್ರಿಯು ಭಗವಂತನಿಗೆ ಪ್ರೀತಿಕರವಾಗಿರುವುದರಿಂದ ಅದು ಜನರ ಪಾತಕಗಳನ್ನು ಕಳೆಯುತ್ತದೆ. ಧಾತ್ರೀ ಪತ್ರಗಳನ್ನು ಭಗವಂತನಿಗೆ ಅರ್ಪಿಸುವುದರಿಂದ ಭಗವಂತನಿಗೆ ಅತಿಶಯ ಪ್ರೀತಿವುಂಟಾಗುತ್ತದೆ.[20]

ಅನಂತರ ಭಗವದ್ಗೀತಾ ಮತ್ತು ವಿಷ್ಣುಸಹಸ್ರನಾಮ, ಸ್ತವರಾಜಗಳನ್ನು ಹೇಳುತ್ತ ಲಕ್ಷ್ಮೀಸಹಿತನಾದ ಆ ಭಗವಂತನಿಗೆ ಮಹಾನೀರಾಜನವನ್ನು ಮಾಡಬೇಕು. ಗಜೇಂದ್ರಮೋಕ್ಷವನ್ನು ಸ್ಮರಿಸುತ್ತ ಭಗವಂತನನ್ನು ಸ್ತೋತ್ರ ಮಾಡಬೇಕು.[21]

ಭಗವಂತನ ನೈವೇದ್ಯಶೇಷವನ್ನು ಬ್ರಾಹ್ಮಣರಿಗೆ ದಕ್ಷಿಣಾ ಸಹಿತವಾಗಿಕೊಟ್ಟು ನಂತರ ಯಜಮಾನನು ಬಂಧು ಬಾಂಧವರಿಂದ ಕೂಡಿಕೊಂಡು ಭಗವಂತನಿಗೆ ನಿವೇದಿತ ಪದಾರ್ಥಗಳನ್ನು ಸ್ವೀಕರಿಸಬೇಕು.

---

19) ತತಃ ಕಾರ್ತಿಕ ಮಾಸಸ್ಯ ದ್ವಾದಶ್ಯಾಂ ಪರಮೋತ್ಸವಮ್।
ಪ್ರಾತರ್ವಿಧಾಯ ಕುರ್ವೀತ ಸಾಯಂ ದಾಮೋದರಾರ್ಚನಮ್।
ತುಲಸೀ ಸನ್ನಿಧೌ ಕೃತ್ವಾ ಪತಾಕಾಧ್ವಜ ಶೋಭಿತಮ್॥
ಪೂಜಯೇತ್ ಪರಯಾಭಕ್ತ್ಯಾ ಪಂಚರಾತ್ರೋಕ್ತ ಮಾರ್ಗತಃ॥
ಚಾತುರ್ಮಾಸ್ಯ ಮಹಾತ್ಮೆ (19–95,96)

20) ತುಲಸ್ಯಾ ವಾಥ ಧಾತ್ರ್ಯಾಶ್ಚ ಫಲೈಶ್ಚಾಪಿ ಪ್ರಪೂಜಯೇತ್।
ಯತಃ ಸಾ ಮತ್ಪ್ರಿಯಾದೇವಿ ತತೋ ಹಂತಿ ಚ ಪಾತಕಮ್।
ತದರ್ಪಣೇನ ಮೇ ಪ್ರೀತಿರ್ಜಾಯತೇ ದೇವಿ ಸರ್ವದಾ॥
ಚಾತುರ್ಮಾಸ್ಯ ಮಹಾತ್ಮೆ (19–105)

21) ತತೋ ನೀರಾಜಯೇನ್ಮಾಂ ಚ ಲಕ್ಷ್ಮೀಸಹಿತಮೀಶ್ವರಮ್।
ಗೀತಾ ಸಹಸ್ರನಾಮಾಭ್ಯಾಂ ಸ್ತವರಾಜೇನ ವಾ ಪುನಃ।
ಅನುಸ್ಮೃತ್ಯಾ ಗಜೇಂದ್ರಸ್ಯ ಮೋಕ್ಷಣೇನ ಸ್ತುವೀತ ಮಾಮ್॥
ಚಾತುರ್ಮಾಸ್ಯ ಮಹಾತ್ಮೆ (19–107)

ಕಾರ್ತಿಕಮಾಸದ ಪೌರ್ಣಿಮೆಯ ದಿನ ಪುನಃ ಶ್ರೀಹರಿಯನ್ನು ಪೂಜಿಸಬೇಕು. ಈ ಪೌರ್ಣಿಮೆಯು ಚಾತುರ್ಮಾಸ್ಯದ ಕೊನೆಗಿರುವ ಪುಣ್ಯತಿಥಿಯು. ಆ ದಿನ ಮಾಡುವ ಸ್ನಾನಾದಿಗಳು ಅಕ್ಷಯವಾದ ಫಲಗಳನ್ನು ವಿಶೇಷವಾದ ಪುಣ್ಯವನ್ನು ಕೊಡುತ್ತವೆ.[22]

---

22) ಸಾऽಪಿ ಪುಣ್ಯಾ ತಿಥಿಃ ಪ್ರೋಕ್ತಾ ಚಾತುರ್ಮಾಸ್ಯಾಂತ ವರ್ತಿನೀ।
ತಸ್ಯಾಂ ಯತ್ ಸ್ನಾನದಾನಾದಿ ತದಪ್ಯಕ್ಷಯ್ಯತಾಂ ವ್ರಜೇತ್॥
ಚಾತುರ್ಮಾಸ್ಯ ಮಹಾತ್ಮೆ (19–112)

****

# ಶ್ರೀವಿಷ್ಣುಶಯನೋತ್ಸವ

ಚಾತುರ್ಮಾಸ್ಯಕಾಲದ ಆಷಾಢ ಶುದ್ಧ ಏಕಾದಶೀತಿಥಿಗೆ "ಶಯನೀ" ಎಂದು ಹೆಸರಿದೆ. ಈ ದಿನ ಶ್ರೀವಿಷ್ಣುವು ಕ್ಷೀರಸಮುದ್ರದಲ್ಲಿ ಶೇಷಶಾಯಿಯಾಗಿ ಯೋಗನಿದ್ರೆಯಲ್ಲಿ ಇರುತ್ತಾನೆ. ನಿದ್ರೆಯು ಬಂದಂತೆ ನಟಿಸುತ್ತಾನೆಂದು ತಿಳಿಯಬೇಕು.

ಈ ಶಯನೀ ಏಕಾದಶೀ ದಿನದಂದು ಹಿಂದಿನ ದಿನ ಪಂಚಾಮೃತ ಅಭಿಷೇಕ ಮಾಡಿ ಶ್ರೀಲಕ್ಷ್ಮೀನಾರಾಯಣರ ಮೂರ್ತಿಗಳನ್ನು ಒಂದು ಸಂಪುಟದಲ್ಲಿ ಮಲಗಿಸಿ-ಸಂಪುಟಕ್ಕೆ ಹೂ, ಗಂಧ, ತುಲಸಿಗಳನ್ನು ಏರಿಸಿ ಪೂಜಿಸಬೇಕು. "ಸುಪ್ತೇತ್ವಯಿಜಗನ್ನಾಥ" ಮಂತ್ರದಿಂದ ಪ್ರಾರ್ಥಿಸಿ ಏಕಾದಶಿ ರಾತ್ರಿಯಲ್ಲಿ ಜಾಗರಣೆ ಮಾಡಬೇಕು. ದ್ವಾದಶೀದಿನ ಶ್ರೀಹರಿಪೂಜೆಮಾಡಿ ಪಾರಣೆಮಾಡಬೇಕು.

ಚಾತುರ್ಮಾಸ್ಯದ ಅರ್ಧಕಾಲವು ಕಳೆಯುತ್ತಿರಲು ಭಾದ್ರಪದ ಶುಕ್ಲ ಏಕಾದಶಿ ದಿನದಂದು ಶ್ರೀವಿಷ್ಣುವು ಇನ್ನೊಂದಡೆಗೆ ಮಗ್ಗುಲಾಗಿ ಮಲಗುತ್ತಾನೆ. ಈ ಏಕಾದಶಿಗೆ "ಪರಿವರ್ತಿನೀ" ಎಂದು ಹೆಸರು ಆಗ ಶ್ರೀವಿಷ್ಣುವಿನ "ಪರಿವರ್ತನೋತ್ಸವ"ವನ್ನು ಆಚರಿಸಬೇಕು.

ಚಾತುರ್ಮಾಸ್ಯದ ಕೊನೆಯ-ಅಂದರೆ ಕಾರ್ತಿಕ ಶುಕ್ಲ ಏಕಾದಶೀತಿಥಿಗೆ "ಪ್ರಬೋಧಿನೀ" ಎಂದು ಕರೆಯುತ್ತಾರೆ. ಈ ದಿನ ಶ್ರೀವಿಷ್ಣುವು ಯೋಗನಿದ್ರೆಯಿಂದ ಎಚ್ಚರಗೊಂಡವನಂತೆ ತೋರಿಸುತ್ತಾನೆ. ಕಾರಣ "ಪ್ರಬೋಧೋತ್ಸವ"ವನ್ನು ಆಚರಿಸಬೇಕು.

ಈ ಮೂರು ಏಕಾದಶೀ ತಿಥಿಗಳಲ್ಲಿ ಎಲ್ಲರೂ ಮುದ್ರಾಧಾರಣೆಯನ್ನು ತಮ್ಮ ತಮ್ಮ ಪೀಠಾಧಿಪತಿಗಳಿಂದ ಮಾಡಿಸಿಕೊಳ್ಳಬೇಕು.

****

# ಚಾತುರ್ಮಾಸ್ಯ ವ್ರತಾಚರಣೆಯ ಫಲ

ಭಗವಂತನ ಅನುಗ್ರಹ ಸಂಪಾದನೆಗಾಗಿ ಚಾತುರ್ಮಾಸ್ಯದಲ್ಲಿ ಯಾವ ದಿನದಲ್ಲಿ ಉಪವಾಸ ಮಾಡಿದರೂ ಆ ಮನುಷ್ಯನಿಗೆ ಏಕಾದಶೀ ಉಪವಾಸಕ್ಕಿಂತಲೂ ಹತ್ತುಪಟ್ಟು ಅಧಿಕವಾದ ಫಲವುದೊರೆಯುತ್ತದೆ. [1]

ಎಲ್ಲ ಪುರಾಣಗಳಲ್ಲಿ ಭಾಗವತವು ಶ್ರೇಷ್ಠವಾದುದೆಂದು ತಿಳಿಯಲ್ಪಟ್ಟಿದೆ. ಭಾಗವತಪುರಾಣವನ್ನು ಹೇಳುವುದರಿಂದ ವೇದಾಧ್ಯಯನದ ಫಲವು ಪ್ರಾಪ್ತವಾಗುತ್ತದೆ. ಕೇವಲ ಶ್ರವಣಮಾಡುವದರಿಂದ ಇದರ ಅರ್ಧದಷ್ಟು ಫಲವೂ ಹಾಗೂ ಅರ್ಥಾನುಸಂಧಾನಪೂರ್ವಕ ಶ್ರವಣಮಾಡುವುದರಿಂದ ಇದರ ಹತ್ತು ಪಟ್ಟು ಫಲವು ಪ್ರಾಪ್ತವಾಗುತ್ತದೆ. ಭಾಗವತವನ್ನು ಪಠಿಸುವವನಿಗೆ ವೇದಾಧ್ಯಯನದ ಎರಡು ಪಟ್ಟು ಫಲವೂ, ವ್ಯಾಖ್ಯಾನಿಸುವವನಿಗೆ ಇದರ ನೂರುಪಟ್ಟಿಗಿಂತ ಅಧಿಕ ಫಲವು ದೊರೆಯುತ್ತದೆ. [2]

ಮಹಾಭಾರತವು ವೇದಸದೃಶವಾಗಿದೆ. ಬಹ್ವರ್ಥಗರ್ಭಿತವಾಗಿದೆ. ಮಹಾಭಾರತದಲ್ಲಿರುವ ಭಗವದ್ಗೀತೆ ಹಾಗೂ ವಿಷ್ಣುಸಹಸ್ರನಾಮಗಳ ಪಠಣದಿಂದ, ಮಹಾಭಾರತವನ್ನು ಸಂಪೂರ್ಣವಾಗಿ ಪಠಿಸುವದಕ್ಕಿಂತ ನೂರುಪಟ್ಟು ಅಧಿಕವಾದ ಫಲವಿದೆ ಇವುಗಳನ್ನು ಭಕ್ತಿಯಿಂದ ಶ್ರವಣ ಮಾಡುವ ಶ್ರೋತೃವು ಇದರ ಅರ್ಧಫಲವನ್ನು ಪಡೆಯುವನು. [3]

---

1) ಉಪವಾಸಂ ತು ಮತ್ಪ್ರೀತ್ಯೈ ಯಸ್ಮಿನ್ ಕಸ್ಮಿನ್ ದಿನೇ ನರಃ।
ಕುರ್ಯಾದ್ದಶಗುಣಂ ತತ್ ಸ್ಯಾದೇಕಾದಶ್ಯುಪವಾಸತಃ॥
ಶ್ರೀವರಾಹಪುರಾಣ ಚಾ.ಮಾ.ಮಹಾತ್ಮೆ(10–3)

2) ಸರ್ವೇಷ್ವಪಿ ಪುರಾಣೇಷು ಶ್ರೇಷ್ಠಂ ಭಾಗವತಂ ಸ್ಮೃತಮ್।
ವೇದತುಲ್ಯಫಲಂ ಪಾಠೇ ಶ್ರವಣೇ ಚ ತದರ್ಧಕಮ್॥
ಅರ್ಥ ಶ್ರವಣಶ್ಚಾಸ್ಯ ಪುಣ್ಯಂ ದಶಗುಣಂ ಸ್ಮೃತಮ್।
ವಕ್ತುಃ ಸ್ಯಾದ್ದ್ವಿಗುಣಂ ಪುಣ್ಯಂ ವ್ಯಾಖ್ಯಾತುಶ್ಚ ಶತಾಧಿಕಮ್॥
ಶ್ರೀವರಾಹಪುರಾಣ ಚಾ.ಮಾ.ಮಹಾತ್ಮೆ(10–72,73)

3) ಭಾರತಂ ವೇದತುಲ್ಯಂ ಸ್ಯಾದರ್ಥತೋಽಧಿಕಮುಚ್ಯತೇ।
ತತ್ರಾಪಿ ಭಗವದ್ಗೀತಾ ವಿಷ್ಣೋರ್ನಾಮಸಹಸ್ರಕಮ್॥
ಶತಾಧಿಕಫಲ ಪ್ರೋಕ್ತಂ ಭಾರತಾದಪಿ ಸರ್ವಶಃ।
ಶ್ರೋತಾಽರ್ಧ ಫಲಮಾಪ್ನೋತಿ ಭಕ್ತಿತಃ ಶೃಣುಯಾತ್ತು ಯಃ॥
ಶ್ರೀವರಾಹಪುರಾಣ ಚಾ.ಮಾ.ಮಹಾತ್ಮೆ(10–81,82)

ಶ್ರಾವಣಮಾಸದಲ್ಲಿ ಶಾಕಾದಿಗಳನ್ನು, ಭಾದ್ರಪದದಲ್ಲಿ ದಧಿಯನ್ನು, ಆಶ್ವಿನದಲ್ಲಿ ಕ್ಷೀರವನ್ನು, ಮತ್ತು ಕಾರ್ತಿಕದಲ್ಲಿ ದ್ವಿದಲ ಧಾನ್ಯಗಳನ್ನು ಸೇವಿಸುವವನು ಮಾಡಿದ ಕರ್ಮಗಳೆಲ್ಲವೂ ನಿಷ್ಫಲವಾಗುವವು.[4]

ಕಾರ್ತಿಕ ಪೂರ್ಣಿಮೆಯದಿನ ಪುನಃ ಶ್ರೀಹರಿಯನ್ನು ಪೂಜಿಸಬೇಕು. ಈ ಪೌರ್ಣಿಮೆಯು ಚಾತುರ್ಮಾಸ್ಯದ ಕೊನೆಗಿರುವ ಪುಣ್ಯತಿಥಿಯು. ಆ ದಿನ ಮಾಡುವ ಸ್ನಾನಾದಿಗಳು ಅಕ್ಷಯವಾದ ಫಲಗಳನ್ನು, ವಿಶೇಷವಾದ ಪುಣ್ಯವನ್ನು ಕೊಡುತ್ತವೆ.[5]

ಸ್ಕಂದ ಪುರಾಣವು ತಿಳಿಸುವಂತೆ ಚಾತುರ್ಮಾಸ್ಯವ್ರತವು ಸರ್ವಪಾಪಹರವೂ, ಸಕಲ ಉಪದ್ರವ ನಾಶಕರವೂ, ಮಹಾಪುಣ್ಯದಾಯಕವೂ ಆಗಿದೆಯಂದು ತಿಳಿಯಬೇಕು.

****

---

4) ಶ್ರಾವಣೇ ಯಸ್ತು ಶಾಕಾನಿ ದಧಿ ಭಾದ್ರಪದೇ ತಥಾ।
ಕ್ಷೀರಂ ಚೈವಾಶ್ವಿನೇ ಮಾಸಿ ಕಾರ್ತಿಕೇ ದ್ವಿದಲಾನಿ ಚ।
ಭುಂಜಾನಸ್ತತ್ ಕೃತಂ ಕರ್ಮ ಸರ್ವಮಪ್ಯಫಲಂ ಭವೇತ್॥
ಶ್ರೀವರಾಹಪುರಾಣ ಚಾ.ಮಾ.ಮಹಾತ್ಮೆ(17–69)

5) ಪೌರ್ಣಮಾಸ್ಯಾಂ ತತಃ ಕುರ್ಯಾತ್ ಪುನಃ ಪೂಜನಮೀಶಿತುಃ।
ಸಾಽಪಿ ಪುಣ್ಯಾತಿಥಿಃ ಪ್ರೋಕ್ತಾ ಚಾತುರ್ಮಾಸ್ಯಾಂತವರ್ತಿನೀ।
ತಸ್ಯಾಂ ಯತ್ ಸ್ನಾನದಾನಾದಿ ತದಪ್ಯಕ್ಷಯ್ಯತಾಂ ವ್ರಜೇತ್॥
ಶ್ರೀವರಾಹಪುರಾಣ ಚಾ.ಮಾ.ಮಹಾತ್ಮೆ(19–112)

# ಚಾತುರ್ಮಾಸ್ಯ ವ್ರತ ಸಂಕಲ್ಪ ಹಾಗೂ ಸಮರ್ಪಣೆ ಮಂತ್ರಗಳು

ಆಚಮನ, ಪ್ರಾಣಾಯಾಮ, ದೇಶಕಾಲಗಳನ್ನು ಉಚ್ಚರಿಸಿ.. ಶ್ರುತಿಸ್ಮೃತಿ ಪುರಾಣೋಕ್ತ ಫಲಪ್ರಾಪ್ತ್ಯರ್ಥಂ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಚಾತುರ್ಮಾಸ್ಯವ್ರತಂ ಕರಿಷ್ಯೇ–

1) **ಶಾಕವ್ರತ–** ಆಷಾಢ ಶುದ್ಧ ಏಕಾದಶಿಯಿಂದ ಶ್ರಾವಣ ಶುದ್ಧದಶಮಿವರೆಗೆ

ಸಂಕಲ್ಪ : ವಾಸುದೇವ ಶುಚೌಮಾಸೇ ಶಾಕವ್ರತಮನುತ್ತಮಮ್।
ತ್ವತ್ಪ್ರೀತ್ಯರ್ಥಂ ಕರಿಷ್ಯೇಽಹಂ ನಿರ್ವಿಘ್ನಂ ಕುರುಮಾಧವ॥

ಸಮರ್ಪಣೆ : ವಾಸುದೇವ ನಮಸ್ತುಭ್ಯಂ ಪ್ರಥಮೇ ಮಾಸಿ ಮತ್ಕೃತಮ್।
ಶಾಕವ್ರತಂ ಮಯಾ ತೇನ ಸಂತುಷ್ಟೋ ಭವ ಮಾಧವ॥

2) **ದಧಿವ್ರತ–** ಶ್ರಾವಣಶುದ್ಧ ಏಕಾದಶಿಯಿಂದ ಭಾದ್ರಪದಶುದ್ಧ ದಶಮಿವರೆಗೆ

ಸಂಕಲ್ಪ : ಸಂಕರ್ಷಣಾರವಿಂದಾಕ್ಷ ಕರಿಷ್ಯೇಽಹಂ ದಧಿವ್ರತಮ್।
ದ್ವಿತೀಯೇ ಮಾಸಿ ದೇವೇಶ ನಿರ್ವಿಘ್ನಂ ಕುರುಮೇ ಪ್ರಭೋ॥

ಸಮರ್ಪಣೆ: ಸಂಕರ್ಷಣ ನಮಸ್ತುಭ್ಯಂ ಶ್ರವಣೇ ಮತ್ಕೃತೇನ ಚ।
ದಧಿವ್ರತೇನ ದೇವೇಶ ತುಷ್ಟೋ ಭವ ಜನಾರ್ದನ॥

3) **ಕ್ಷೀರವ್ರತ–** ಭಾದ್ರಪದ ಶುದ್ಧ ಏಕಾದಶಿಯಿಂದ ಆಶ್ವಿನ ಶುದ್ಧ ದಶಮಿವರೆಗೆ

ಸಂಕಲ್ಪ : ಪ್ರದ್ಯುಮ್ನ ತವ ತುಷ್ಟ್ಯರ್ಥಂ ಪ್ರೋಷ್ಠಪದ್ಯಾಂ ತೃತೀಯಕೇ।
ನಿರ್ವಿಘ್ನಂ ಕುರು ದೇವೇಶ ಕರಿಷ್ಯೇಽಹಂ ಪಯೋವ್ರತಂ॥

ಸಮರ್ಪಣೆ : ಶ್ರೀಪ್ರದ್ಯುಮ್ನ ನಮಸ್ತುಭ್ಯಂ ಮಾಸಮಾರಭ್ಯ ಯತ್ಕೃತಂ।
ಇಷ್ಟದೋ ಭವ ಸರ್ವೇಶ ಗೃಹೀತ್ವಾ ತು ಪ್ರಯೋವ್ರತಂ॥

4) **ದ್ವಿದಲ ವ್ರತ–** ಆಶ್ವಿನ ಶುದ್ಧ ಏಕಾದಶಿಯಿಂದ ಕಾರ್ತಿಕ ಶುದ್ಧ ದಶಮಿವರೆಗೆ

ಸಂಕಲ್ಪ : ಅನಿರುದ್ಧ ಸುರೈರ್ವಂದ್ಯ ದ್ವಿದಳ ವ್ರತಮುತ್ತಮಂ।
ಕರೋಮ್ಯಹಮಿಷೇ ಮಾಸೇ ನಿರ್ವಿಘ್ನಂ ಕುರು ಮೇ ಪ್ರಭೋ॥

ಸಮರ್ಪಣೆ : ಅನಿರುದ್ಧ ನಮಸ್ತುಭ್ಯಂ ದ್ವಿದಳಾಖ್ಯ ವ್ರತೇನ ಚ।
ಮತ್ಕೃತೇನಾಶ್ವಿನೇ ಮಾಸೇ ಪ್ರೀತ್ಯರ್ಥಂ ಫಲದೋಭವ॥

****

## ಇದೇ ಲೇಖಕರ ಪ್ರಕಟಿತ ಕೃತಿಗಳು (ಮುಂದುವರಿದುದು)

| | | |
|---|---|---|
| 76) | ದಾಸಸಾಹಿತ್ಯ ಕುಸುಮಾಂಜಲಿ | 30-00 |
| 77) | ಜೀವತತ್ವ ಚಿಂತನೆ | 50-00 |
| 78) | ಶ್ರೀ ವಿಜಯಧ್ವಜತೀರ್ಥರು (ಜೀವನ,ಕೃತಿಗಳಪರಿಚಯ) | 15-00 |
| 79) | ತಿಥಿತ್ರಯ ಆಚರಣೆ | 20-00 |
| 80) | ಶ್ರೀಮದ್ ಭಾಗವತಾಂತರ್ಗತ ಜಾಯಂತೇಯೋಪಾಖ್ಯಾನ ಸಾರಸಂಗ್ರಹ (ವಿವರಣೆ ಸಹಿತ) | 20-00 |
| 81) | ಶ್ರೀನರಸಿಂಹಜಯಂತೀವ್ರತಪೂಜಾವಿಧಾನ (ನರಸಿಂಹಪ್ರಾದುರ್ಭಾವಕಥಾ ಸಹಿತ) | 20-00 |
| 82) | ಶ್ರೀಅಷ್ಟೋತ್ತರಶತನಾಮಸ್ತೋತ್ರಮಂಜರೀ(ಅಪೂರ್ವ ಸ್ತೋತ್ರ ಸಂಗ್ರಹ) | 25-00 |
| 83) | ಶ್ರೀಮನ್ಮಹಾಭಾರತ ನಿರೂಪಿಸಿದ ಧರ್ಮರಹಸ್ಯಗಳು (ಸದಾಚಾರಧರ್ಮನಿರೂಪಣೆ ಸಹಿತ) | 25-00 |
| 84) | ಶ್ರೀಮದ್ಭಾಗವತದ ಮಧುಬಿಂದುಗಳು | 25-00 |
| 85) | ತ್ರಿಸುಪರ್ಣಸೂಕ್ತಮ್ ಹಾಗೂ ಶ್ರೀನಾರಾಯಣ ಸೂಕ್ತಮ್ (ಶ್ರೀಧೀರೇಂದ್ರತೀರ್ಥರ ವ್ಯಾಖ್ಯಾನುಸಾರಿ ಕನ್ನಡಾನುವಾದ ಸಹಿತ) | 15-00 |
| 86) | ಶ್ರೀಶ್ರೀನಿವಾಸ ಕಲ್ಯಾಣ (ಕಿರುನಾಟಕ) | 15-00 |
| 87) | ತೀರ್ಥಶ್ರಾದ್ಧ ವಿಧಾನ | 40-00 |
| 88) | ಶ್ರೀವಿಜಯದಾಸಾರ್ಯರ ಪಂಚರತ್ನ ಸುಳಾದಿಗಳು-ಅಧ್ಯಯನ | 30-00 |
| 89) | ಶ್ರೀರಾಘವೇಂದ್ರಸ್ತೋತ್ರಮ್ ಹಾಗೂ ಶ್ರೀಗುರುಗುಣಸ್ತವನಮ್ (ಕನ್ನಡಾನುವಾದ) | 20-00 |
| 90) | ಶ್ರೀದುರ್ಗಾಸ್ತೋತ್ರಮಂಜರೀ (ಅಪೂರ್ವಸ್ತೋತ್ರಸಂಗ್ರಹ) | 20-00 |
| 91) | ಶ್ರೀಹರಿಕಥಾಮೃತಸಾರ-ಪಿತೃಗಣಸಂಧಿ ಪರಿಚಯ (ಇಂದಿರೇಶಪ್ರಕಾಶನ ಗಂಗಾವತಿ ಪ್ರಕಟಿತ) | 10-00 |
| 92) | ಚಾತುರ್ಮಾಸ್ಯ ವ್ರತಾಚರಣೆ | 15-00 |



**ಶ್ರೀನಿವಾಸೇಽಸ್ತು ಮೇ ಮನಃ**